






# ದಾಸ
# ಸಾಹಿತ್ಯ
# ಪ್ರವೇಶಿಕೆ






ನಾವೆಲ್ಲಿ ಜಿ. ವೆಂಕಟೇಶ್

# ದಾಸ ಸಾಹಿತ್ಯ ಪ್ರವೇಶಿಕೆ

ಲೇಖಕರು ಮತ್ತು ಪ್ರಕಾಶಕರು
**ನಾವೆಲ್ಲಿ ಜಿ. ವೆಂಕಟೇಶ್**
www.dasasahithyamahithi.com

75, ನಾವೆಲ್ಲಿ ಹೌಸ್, ರೈಲ್ವೇ ಪ್ಯಾರಲಲ್ ರಸ್ತೆ,
1ನೇ ಬ್ಲಾಕ್, ಕುಮಾರಾಪಾರ್ಕ್ ಪಶ್ಚಿಮ, ಬೆಂಗಳೂರು 560020
ದೂರವಾಣಿ : 9886408691

Dasasahithya Praveshike – An introductory to Karnataka Haridasa Literature in Kannada. Authored and Published By G. Venkatesh, No. 75, Novelty House, Railway Parallel Road, I Block, Kumarapark West, Bangalore 560020, Mob : 9886408691

ದಾಸ ಸಾಹಿತ್ಯ ಪ್ರವೇಶಿಕೆ – ಕರ್ನಾಟಕ ಹರಿದಾಸ ಸಾಹಿತ್ಯ ಪರಿಚಯಾತ್ಮಕ ಗ್ರಂಥ. ಲೇಖಕರು ಮತ್ತು ಪ್ರಕಾಶಕರು ಜಿ. ವೆಂಕಟೇಶ್, 75, ನಾವೆಲ್ಟಿ ಹೌಸ್, ರೈಲ್ವೇ ಪ್ಯಾರಲಲ್ ರಸ್ತೆ, 1ನೇ ಬ್ಲಾಕ್, ಕುಮಾರಾಪಾರ್ಕ್ ಪಶ್ಚಿಮ, ಬೆಂಗಳೂರು 560020

ಮೊದಲನೆ ಪ್ರಕಟಣೆ : 2020



Pages : 72

ಪುಟಗಳು : 72

Price : Rs.50/-

ಬೆಲೆ: ರೂ.50/–

ಮುದ್ರಕರು:
*Parishree Printers,*
# 38/2, 2nd Cross, Nagappa Block
Srirampuram, Bengaluru - 560 021
Tel: 2312 8286, Email: parishree@yahoo.com

# ಪರಿವಿಡಿ

**ವಿಷಯ** **ಪುಟ ಸಂಖ್ಯೆ**


| | | |
|---|---|---|
| 1. | ಹರಿದಾಸ ಎಂದರೆ ಯಾರು ? | 9 |
| 2. | ಹರಿದಾಸ ಸಾಹಿತ್ಯ ಅಂದರೇನು ? | 13 |
| 3. | ಹರಿದಾಸ ಸಾಹಿತ್ಯದಲ್ಲಿ ಅಂಕಿತ | 15 |
| 4. | ಹರಿದಾಸ ಸಾಹಿತ್ಯದ ಉಗಮ ಕಾಲ ಮತ್ತು ಮೊದಲನೆಯ ಘಟ್ಟ | 18 |
| 5. | ಹರಿದಾಸ ಸಾಹಿತ್ಯದ ಎರಡನೆಯ ಘಟ್ಟ | 23 |
| 6. | ಹರಿದಾಸರ ರಚನೆಗಳ ಪ್ರಕಾರಗಳು | 25 |
| 7. | ಕೆಲವು ಕೀರ್ತನೆಗಳ ಸಂಕ್ಷಿಪ್ತ ಅರ್ಥ (ಪಂಡಿತರುಗಳ ಲೇಖನಗಳಿಂದ ಆಯ್ದ ಸಾರ ಸಂಗ್ರಹ) | 42 |
| 8. | ಹರಿದಾಸರ ಕೀರ್ತನೆಗಳ ಹಾಡುಗಾರಿಕೆ | 50 |
| 9. | ಹರಿದಾಸ ಸಾಹಿತ್ಯದ ಸಂಗ್ರಹಣೆ, ಸಂಪಾದನೆ, ಪ್ರಚಾರ ಮತ್ತು ಪ್ರಕಟನೆ | 56 |
| 10. | ಅನುಬಂಧಗಳು | 59 |
| 11. | ಗ್ರಂಥ ಋಣ | 70 |


**ವಿಶೇಷ ಸೂಚನೆ :** ಈ ಗ್ರಂಥದಲ್ಲಿ ಯಾವುದಾದರೂ ವಾಕ್ಯ/ವಿಷಯದ ಜೊತೆಯಲ್ಲಿ $^{x}$ ಎಂಬ ರೀತಿಯಲ್ಲಿ (ಎತ್ತರದಲ್ಲಿ) ಒಂದು ಸಂಖ್ಯೆಯನ್ನು ಕೊಟ್ಟಿದ್ದರೆ, ಆ ವಾಕ್ಯ/ವಿಷಯವನ್ನು ಗ್ರಂಥ ಋಣ ವಿಭಾಗದಲ್ಲಿರುವ x ಸಂಖ್ಯೆಯ ಮೂಲದಿಂದ ಪಡೆದದ್ದು ಎಂದು ತಿಳಿಯಬೇಕು



# ಅರ್ಪಣೆ

ಈ ಸುಂದರ ಜನ್ಮ ಕೊಟ್ಟ

ದಿವಂಗತ ಜಿ. ಸಾವಿತ್ರಮ್ಮ

ಮತ್ತು

ದಿವಂಗತ ನಾವೆಲ್ಲಿ ಡಿ. ಕೆ. ಗುರುರಾಯರಿಗೆ



# ಪೀಠಿಕೆ

ಹರಿದಾಸ ಕೀರ್ತನೆಗಳ ಹಾಡುಗಾರಿಕೆಯ ಸ್ಪರ್ಧೆಗಳಲ್ಲಿ ತೀರ್ಪುಗಾರನಾಗಿ ಭಾಗವಹಿಸಿದಾಗ ಮತ್ತು ಕೀರ್ತನೆಗಳ ಸೀ.ಡೀ. ರೆಕಾರ್ಡಿಂಗ್ ಮಾಡುವಾಗ ನಾನು ಗಮನಸಿದ್ದು, ಹಾಡುವವರು ದಾಸರ ಕೀರ್ತನೆಗಳನ್ನು ಕಂಠಪಾಠ ಮಾಡಿ ಹಾಡಿದರೂ, ಅವರಲ್ಲಿ ಅನೇಕರಿಗೆ ಹರಿದಾಸ ಸಾಹಿತ್ಯದ ಬಗ್ಗೆ ಹೆಚ್ಚು ತಿಳಿವಳಿಕೆ ಇರುವಂತೆ ಕಂಡು ಬರಲಿಲ್ಲ. ಇದಕ್ಕಾಗಿ ನಮ್ಮ ಸಂಸ್ಥೆಯಿಂದ ಇಸವಿ 2014ರಲ್ಲಿ ಅನೇಕ ಸ್ಥಳಗಳಲ್ಲಿ "ಹರಿದಾಸ ಸಾಹಿತ್ಯ ಪರಿಚಯಾತ್ಮಕ ಕಮ್ಮಟ"ಗಳನ್ನು ನಡೆಸಿದೆವು. ಅದರಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳು ಕಾರ್ಯಕ್ರಮ ಬಹಳ ಉಪಯುಕ್ತವಾಯಿತೆಂದು ತಿಳಿಸಿದರು. ಕಾರಣಾಂತರಗಳಿಂದ ಈ ಕಾರ್ಯಕ್ರಮಗಳನ್ನು ಮುಂದುವರೆಸಲು ಸಾಧ್ಯವಾಗಲಿಲ್ಲ. ಆಗಿನಿಂದ ಕಮ್ಮಟದಲ್ಲಿ ತಿಳಿಸಿದ ವಿಷಯಗಳನ್ನು ಒಂದು ಗ್ರಂಥವಾಗಿ ಪ್ರಕಟಿಸಬೇಕೆಂಬ ಹಂಬಲವಿದ್ದು ಹಲವು ಪ್ರಯತ್ನಗಳು ವಿಫಲವಾದವು.

ಇತ್ತೀಚೆಗೆ ಶ್ರೀ ಹಯವದನೋಪನಿಷತ್ ಪ್ರಸಾರಣಾ ಪ್ರತಿಷ್ಠಾನದವರ ಆಶ್ರಯದಲ್ಲಿ ನಡೆದ ಒಂದು ವೆಬ್ ಸೆಮಿನಾರಿನಲ್ಲಿ ಹರಿದಾಸ ಸಾಹಿತ್ಯದ ಬಗ್ಗೆ ಮಾತನಾಡಲು ನನಗೆ ಅವಕಾಶ ಸಿಕ್ಕಿ, ಅರ್ಧ ಗಂಟೆಯ ವೇಳೆಯ ನಾಲ್ಕು ಭಾಗಗಳಲ್ಲಿ ಅನೇಕ ವಿಷಯಗಳನ್ನು ತಿಳಿಸಲು ಸಾಧ್ಯವಾಯಿತು. ಈ ಕಾರ್ಯಕ್ರಮಕ್ಕೆ ಶ್ರೋತೃಗಳಿಂದ ಪ್ರೋತ್ಸಾಹಕರವಾದ ಪ್ರತಿಕ್ರಿಯೆ ದೊರೆತುದರಿಂದ, ಅಲ್ಲಿ ತಿಳಿಸಿದ ವಿಷಯಗಳನ್ನು ಪ್ರಕಟಿಸುವುದೂ ಸಹಾ ಈ ಗ್ರಂಥದ ರಚನೆಗೆ ಮತ್ತೊಂದು ಕಾರಣವಾಯಿತು. ಆ ಕಾರ್ಯಕ್ರಮಕ್ಕೆ ಕಾಲದ ಪರಿಮಿತಿ ಇದ್ದುದರಿಂದ, ಅನೇಕ ವಿಷಯಗಳನ್ನು ಸಂಕ್ಷಿಪ್ತವಾಗಿ ತಿಳಿಸಬೇಕಾಯಿತು. ಇಲ್ಲಿ ಆ ಸಂಕೋಚವಿಲ್ಲದಿರುವುದರಿಂದ ವಿಷಯಗಳನ್ನು ಸ್ವಲ್ಪ ವಿಸ್ತಾರವಾಗಿ ತಿಳಿಸಿಲಾಗಿದೆ.

ಹರಿದಾಸ ಸಾಹಿತ್ಯದ ಹೆಚ್ಚಿನ ಗ್ರಂಥಗಳು ವಿದ್ವಾಂಸರಿಂದ ರಚಿತವಾಗಿರುವುದರಿಂದ ಅವುಗಳನ್ನು ಓದುವುದಕ್ಕೆ ಮೊದಲು ವಿಷಯದ ಸ್ಥೂಲ ಪರಿಚಯವಾಗುವಂತೆ ಈ ಗ್ರಂಥವನ್ನು ರಚಿಸಲಾಗಿದೆ. ಈ ಸಣ್ಣ ಪುಸ್ತಕದಲ್ಲಿ ಸಾಧ್ಯವಾದಷ್ಟು ಮಾಹಿತಿಯನ್ನು ಕೊಡಲು ಪ್ರಯತ್ನಿಸಿದ್ದೇನೆ. ಅನೇಕ ಗ್ರಂಥಗಳಿಂದ ಸಂಗ್ರಹಿಸಿದ, ಪಂಡಿತರುಗಳ ಉಪನ್ಯಾಸಗಳಿಂದ ಕೇಳ್ಪಟ್ಟ ಮತ್ತು ನನಗೆ ತಿಳಿದ ವಿಷಯಗಳನ್ನು ಸರಳವಾದ ಭಾಷೆಯಲ್ಲಿ ಪ್ರಸ್ತುತಪಡಿಸಿದ್ದೇನೆ. ಸ್ವತಃ ಸಂಗೀತಗಾರನಾದುದರಿಂದ, ಹಾಡುಗಾರಿಕೆಯ ವಿಭಾಗದಲ್ಲಿ ನನ್ನ ಸ್ವಂತ ಅಭಿಪ್ರಾಯ–ಅನುಭವವಗಳನ್ನು ತಿಳಿಸಿದ್ದೇನೆ.

# ಕೃತಜ್ಞತೆಗಳು

ಹರಿದಾಸ ಸಾಹಿತ್ಯ ಸಂಬಂಧದಲ್ಲಿ ನನ್ನ ಎಲ್ಲ ಕಾರ್ಯಗಳಿಗೂ ವಿಶೇಷ ಸಲಹೆ, ಸೂಚನೆ ಮತ್ತು ಮಾರ್ಗದರ್ಶನ ನೀಡುತ್ತಿರುವ, ನನ್ನ ಗುರುಸಮಾನರಾದ ಬೆಂಗಳೂರಿನ 'ಅನಂತವಿಠಲಾಂಕಿತ'ರಾದ ಶ್ರೀ ಎ.ಎನ್. ಅನಂತಸ್ವಾಮಿರಾಯರಿಗೆ ಹಾಗು ಹರಿದಾಸ ಸಾಹಿತ್ಯದ ಹಿರಿಯ ಸಂಶೋಧಕರಾದ ಮೈಸೂರಿನ ಡಾ. ಶ್ರೀಮತಿ ಟಿ.ಎನ್. ನಾಗರತ್ನ ಅವರುಗಳು ವಿಶೇಷ ಆಸಕ್ತಿ ವಹಿಸಿ ಈ ಗ್ರಂಥಕ್ಕೆ ಬಹಳ ಉಪಯುಕ್ತವಾದ ಸಲಹೆಗಳು ಮತ್ತು ತಿದ್ದುಪಡಿಗಳನ್ನು ಸೂಚಿಸಿದ್ದಾರೆ. ಇದರಿಂದ ಗ್ರಂಥವು ನನ್ನ ನಿರೀಕ್ಷೆಗೂ ಮೀರಿದ ಉಪಯುಕ್ತತೆಯನ್ನು ಪಡೆಯುವಂತಾಗಿದೆ. ಇವರಿಬ್ಬರಿಗೂ ನನ್ನ ನಮಸ್ಕಾರಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಗ್ರಂಥ ರಚನೆಯಲ್ಲಿ ನನಗೆ ವಿವಿಧ ರೀತಿಯಲ್ಲಿ ಸಹಕಾರ, ಸಹಾಯ, ಸಲಹೆ ಮತ್ತು ಸೂಚನೆಗಳನ್ನಿತ್ತ 'ಶ್ರೀ ಮುಖ್ಯಪ್ರಾಣ' ಮಾಸ ಪತ್ರಿಕೆಯ ವ್ಯವಸ್ಥಾಪಕ ಸಂಪಾದಕರಾದ ಶ್ರೀ ಟಿ. ವಿಶ್ವನಾಥ್, ಶ್ರೀ ಹಯವದನೋಪನಿಷತ್ ಪ್ರಸಾರಣಾ ಪ್ರತಿಷ್ಠಾನದ ಶ್ರೀ ಗೋಪಾಲಕೃಷ್ಣ ವರ್ಣ, ಮಿತ್ರರಾದ ಶ್ರೀ ಎಸ್. ಕೆ. ದೇವನಾಥ್, ಡಾ. ಶ್ರೀಮತಿ ವಾರುಣಿ ಜಯತೀರ್ಥಾಚಾರ್ಯ, ಮುಖಪುಟ ವಿನ್ಯಾಸಕ್ಕೆ ಸಹಾಯ ಮಾಡಿದ ಸುನೀತ್ ಹಲಗೇರಿ ಇವರುಳಿಗೆ ನನ್ನ ವಿಶೇಷ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ. ಈ ಸಮಯದಲ್ಲಿ ನನಗೆ ಎಲ್ಲ ರೀತಿಯ ಸಹಕಾರ–ಪ್ರೋತ್ಸಾಹವನ್ನು ನೀಡಿದ ನನ್ನ ಕುಟುಂಬದ ಸದಸ್ಯರಿಗೆ ಪ್ರೀತಿಪೂರ್ವಕವಾದ ಆಶೀರ್ವಾದಗಳನ್ನು ತಿಳಿಸುತ್ತೇನೆ.

ಈ ಗ್ರಂಥ ಎಲ್ಲ ವಯಸ್ಸಿನವರಿಗೂ ಉಪಯುಕ್ತವಾಗಲೆಂದು ಆಶಿಸುತ್ತೇನೆ.

24–10–2020 **ನಾವೆಲ್ಟಿ ಜಿ. ವೆಂಕಟೇಶ್**

# 1. “ಹರಿದಾಸ” ಎಂದರೆ ಯಾರು ?

ಸರ್ವೋತ್ತಮನಾದ ಶ್ರೀಹರಿಯ ದಾಸರೆಲ್ಲ ಹರಿದಾಸರು. ಮೊದಲನೆಯವರು ಶ್ರೀ ಲಕ್ಷ್ಮೀದೇವಿಯವರು. ಅನಂತರ ಬ್ರಹ್ಮ–ವಾಯು ಮೊದಲಾದವರು ಅವನ ದಾಸರು. ಇವರಲ್ಲಿ ಜೀವೋತ್ತಮರಾದ ವಾಯುದೇವರು ಶ್ರೇಷ್ಠರಾದ ದಾಸರು; ವಾಯುದೇವರೇ ಹೇಳಿಕೊಂಡ ‘ದಾಸೋಹಂ ಕೋಸಲೇಂದ್ರಸ್ಯ ರಾಮಸ್ಯಾಕ್ಲಿಷ್ಟ ಕರ್ಮಣಃ’ – ‘ನಾನು ಕೋಸಲದ ದೊರೆ ಮಹಾವೀರ ರಾಮಚಂದ್ರನ ದಾಸ’ ಎಂಬುವ ಮಾತನ್ನು ಇಲ್ಲಿ ಸ್ಮರಿಸಬಹುದು.

ಹರಿದಾಸ ಪಂಥ ಭಕ್ತಿಯ ಪಂಥ. ಹರಿದಾಸ ಸಾಹಿತ್ಯದ ಮುಖ್ಯ ತತ್ತ್ವ ಭಕ್ತಿ. ಆದ್ದರಿಂದ ಮೊದಲು ಭಕ್ತಿ ಅಂದರೇನೆನ್ನುವುದನ್ನು ಸಂಕ್ಷಿಪ್ತವಾಗಿ ತಿಳಿಯೋಣ. ಭಕ್ತಿಯನ್ನು ನಾವೆಲ್ಲರೂ ನಮ್ಮದೇ ಆದ ಒಂದಲ್ಲಾ ಒಂದು ರೀತಿಯಲ್ಲಿ ಪ್ರಕಟಪಡಿಸುತ್ತೇವೆ ಅಥವಾ ಅನುಭವಿಸುತ್ತೇವೆ. ಆದರೆ ಅದನ್ನು ವರ್ಣಿಸಲು ಸಾಮಾನ್ಯ ಜನರಿಗೆ ಸಾಧ್ಯವಾಗದೆ ಇರಬಹುದು. ಭಕ್ತಿ ಎಂದರೇನು ಎಂಬ ಪ್ರಶ್ನೆಗೆ ಹಲವರು ತಮ್ಮದೇ ಆದ ವಿವರಣೆಯನ್ನಿತ್ತಿದ್ದಾರೆ. ಎಲ್ಲರ ‘ಅನುಭವ’ ಒಂದೇ ಆದರೂ ಆ ಅನುಭವದ ಅಭಿವ್ಯಕ್ತಿಯಲ್ಲಿ ವೈವಿಧ್ಯವಿದೆ. ನಾರದ ಭಕ್ತಿ ಸೂತ್ರದಲ್ಲಿ ಹೇಳಿರುವಂತೆ ಭಗವಂತನಲ್ಲಿ ನಮಗಿರುವ ಪರಮ ಪ್ರೀತಿಯೇ ಭಕ್ತಿ; ಯಾವ ರೀತಿಯ ಪ್ರತಿಫಲಾಪೇಕ್ಷೆಯಿಲ್ಲದೆ ಸಂಪೂರ್ಣವಾಗಿ ಅವನೆಡೆಗೆ ಸಾಗುವ ಮನಸ್ಸೇ ಭಕ್ತಿಪೂರ್ವಕವಾದ ಮನಸ್ಸು ಎಂದು ಹೇಳುತ್ತದೆ. “ಯಾರೊಬ್ಬರ ಬಗ್ಗೆಯಾಗಲಿ ನಮಗಿರುವ ಪರಮ ಪ್ರೀತಿಯೇ ಭಕ್ತಿ. ಇಂತಹ ಭಕ್ತಿಯು ಅಥವಾ ಪ್ರೇಮವು ಪರಮಾತ್ಮನೆಡೆಗೆ ಪ್ರವಹಿಸಿದಾಗ ಅದು ಭಗವದ್ಭಕ್ತಿ ಎನಿಸಿಕೊಳ್ಳುವುದು. ಹೀಗೆ ಭಕ್ತನಿಂದ ಭಗವಂತನೆಡೆಗೆ ನಿರಂತರವಾಗಿ ಹರಿಯುವ ಪ್ರೇಮಪ್ರವಾಹವೇ ಭಕ್ತಿ ಎಂದು ಹೇಳಬಹುದು. ಪ್ರೇಮದಿಂದಲೇ ಹುಟ್ಟಿ, ಪ್ರೇಮಮಯವಾಗಿಯೇ ಭಗವಂತನತ್ತ ಸಾಗುವ ಪ್ರೇಮವೇ ಭಕ್ತಿ” [11]. ಗುರು ಹಿರಿಯರಲ್ಲಿ ನಮಗುಂಟಾಗುವ ಪ್ರೀತಿಯೂ ಭಕ್ತಿ ಎಂದು ಹೇಳಲಾಗಿದೆ.

ಶ್ರೀ ಮಧ್ವಾಚಾರ್ಯರು ಭಕ್ತಿ ಎನ್ನುವುದನ್ನು “ಪ್ರೇಮವೇ ಭಕ್ತಿ; ಆದರೆ ಆ ಭಕ್ತಿಯು ಮನೆ, ಮಡದಿ, ಮಕ್ಕಳು, ಮಿತ್ರರು ಮುಂತಾದ ಇತರ ಭೋಗ್ಯ ವಸ್ತುಗಳಿಗಿಂತಲೂ ಅಧಿಕವಾಗಿರಬೇಕು. ಶ್ರೀಹರಿಯ ಅನಂತ ಗುಣ, ಪೂರ್ಣತ್ವವೇ ಮೊದಲಾದ ಮಹಿಮೆಯ ಅರಿವು ಜಾಗೃತವಾಗಿರಬೇಕು. ಇಂಥಹ ದೃಢವಾದ ಭಕ್ತಿಯಿಂದಲೇ ಮೋಕ್ಷ. ಬೇರೆ ಯಾವುದರಿಂದಲೂ ಮೋಕ್ಷ ದೊರೆಯದು” ಎಂದು ತಿಳಿಸಿದ್ದಾರೆ.

ಒಬ್ಬನು 'ದಾಸ'ನೆನಿಸಬೇಕಾದರೆ ಅವನಿಗೆ 'ಈಶ'ನೊಬ್ಬನಿರಲೇಬೇಕು. ಭಗವಂತ ಒಡೆಯ, ತಾನು ಅವನ ಸೇವಕ, ಆಳು, ದಾಸ ಎಂದು ಭಾವಿಸಿ ಭಗವಂತನನ್ನು ಆರಾಧಿಸುವುದು ದಾಸ್ಯ ಭಾವ. ಇವರುಗಳು ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ನಿಷ್ಕಾಮಕರ್ಮಿಗಳಾಗಿ ಭಗವಂತನ ದಾಸ್ಯವನ್ನು ಕೈಗೊಳ್ಳುತ್ತಾರೆ. ಹರಿದಾಸರು ಈ ಈಶ–ದಾಸತ್ವದ ಅನಾದಿ–ನಿತ್ಯವನ್ನು ಒಪ್ಪಿ, ಶ್ರೀಹರಿ ಸರ್ವೋತ್ತಮನು, ವಾಯುದೇವರು ಜೀವೋತ್ತಮರು, ವಾಯುದೇವರ ಅವತಾರವೇ ಶ್ರೀ ಮಧ್ವಾಚಾರ್ಯರು, ಜಗತ್ತು ಸತ್ಯ, ಜೀವ–ಜಡ–ಪರಮಾತ್ಮ ಇವುಗಳಲ್ಲಿ ಪಂಚಭೇದಗಳು ನಿತ್ಯ – ಇವೇ ಮೊದಲಾದ ದ್ವೈತ ತತ್ತ್ವಗಳು ತಮ್ಮ ಮತ ಎಂದು ಒಪ್ಪಿಕೊಳ್ಳುತ್ತಾರೆ. ಇದೇ ತತ್ತ್ವವಾದವನ್ನು ಸಂಗೀತ ಮಾಧ್ಯಮದಿಂದ ಕನ್ನಡ ಭಾಷೆಯಲ್ಲಿ ಕೀರ್ತನೆಗಳಾಗಿ ಅವರು ಹಾಡುತ್ತಾರೆ.

ಭಕ್ತಿ ಮಾರ್ಗವು ಭಾರತದಲ್ಲಿ ಮೊದಲು ದಕ್ಷಿಣದ, ಇಂದಿನ ತಮಿಳುನಾಡಿನಲ್ಲಿ ಕ್ರಿ.ಶ. 6ನೆಯ ಶತಮಾನ ಮತ್ತು 9ನೆಯ ಶತಮಾನದ ಮಧ್ಯದಲ್ಲಿ ವೈಷ್ಣವರಾದ ಆಳ್ವಾರರು ಮತ್ತು ಶೈವರಾದ ನಾಯನಾರ್‌ಗಳಿಂದ ಆರಂಭವಾಯಿತು ಎಂದು ಹೇಳಲಾಗಿದೆ. ಮುಂದೆ ಇಡೀ ದೇಶಕ್ಕೆ ಈ ಭಕ್ತಿ ಮಾರ್ಗ ಹರಡಿತು. ಭಕ್ತಿ ಮಾರ್ಗವನ್ನು ಹಿಡಿದು ಅದರಲ್ಲಿ ಸಾಧನೆ ಮಾಡಲು ಹಾಡನ್ನು ಮಾಧ್ಯಮವನ್ನಾಗಿ ಆಯ್ದುಕೊಂಡ ಅನೇಕ ಭಕ್ತಿ ಪಂಥಗಳು ನಮ್ಮ ದೇಶದಲ್ಲಿ ಆಗಿ ಬಂದಿವೆ. ಹೀಗೆಯೇ ಅನೇಕ ಸಂತರು ಕೂಡ ಆಗಿ ಹೋಗಿದ್ದಾರೆ. ಇವರಲ್ಲಿ ಪ್ರಮುಖರೆಂದರೆ: ಕೇರಳದಲ್ಲಿ ಸ್ವಾತಿ ತಿರುನಾಳ್ ಮಹಾರಾಜರು, ನಮ್ಮ ರಾಜ್ಯದಲ್ಲಿ ಶಿವಶರಣರು ಮತ್ತು ಹರಿದಾಸರು, ಆಂಧ್ರಪ್ರದೇಶದಲ್ಲಿ ಅನ್ನಮಾಚಾರ್ಯರು, ವೇಮನ ಯೋಗಿ, ಭದ್ರಾಚಲ ರಾಮದಾಸ, ಪೋತನ ಮುಂತಾದವರು, ಮಹಾರಾಷ್ಟ್ರದಲ್ಲಿ ಅಭಂಗ್‌ಗಳನ್ನು ರಚಿಸಿದ ವಾರ್ಕರಿ ಪಂಥದ ಸಂತರಾದ ಜ್ಞಾನದೇವ, ನಾಮದೇವ, ತುಕಾರಾಮ, ಏಕನಾಥ, ಸಮರ್ಥರಾಮದಾಸ ಮುಂತಾದವರು, ಗುಜರಾತಿನಲ್ಲಿ ನರಸಿನ್ ಮೆಹ್ತ, ಅಖ ಭಗತ್ ಎಂಬುವರು, ಒರಿಸ್ಸಾದಲ್ಲಿ ಜಯದೇವ, ಪಶ್ಚಿಮ ಬಂಗಾಳದಲ್ಲಿ ಚೈತನ್ಯ ಮಹಾಪ್ರಭುಗಳು, ಸಂತ ರಾಮಪ್ರಸಾದ್ ಅವರುಗಳು, ಬಿಹಾರದಲ್ಲಿ ಮಿಥಿಲಾ ವಿದ್ಯಾಪತಿ, ಅಸ್ಸಾಮಿನಲ್ಲಿ ಶ್ರೀಮಂತ ಶಂಕರದೇವ, ರಾಜಾಸ್ಥಾನದಲ್ಲಿ ಮೀರಾಬಾಯಿ, ಉತ್ತರ ಪ್ರದೇಶದ ವಾರಣಾಸಿಯಲ್ಲಿ ವಲ್ಲಭಾಚಾರ್ಯರು, ರಾಮಾನಂದರು, ತುಲಸೀದಾಸರು, ಕಬೀರದಾಸರು, ಉತ್ತರದಲ್ಲಿ ಸೂರದಾಸರು, ಪಂಜಾಬಿನಲ್ಲಿ ಗುರು ನಾನಕ್, ಕಾಶ್ಮೀರದಲ್ಲಿ ಲಾಲ್‌ದೇಡ್ ಅಥವಾ ಲಲ್ಲೇಶ್ವರಿ ಎಂಬ ಮಹಿಳಾ ಸಂತರು.

ಕರ್ನಾಟಕದ ಎಲ್ಲ ಹರಿದಾಸರೂ ಭಕ್ತ ಪ್ರಹ್ಲಾದನು ಹೇಳಿರುವ ನವವಿಧ ಭಕ್ತಿಯ ಮಾರ್ಗವನ್ನು ತಮ್ಮ ಸಾಧನೆಯ ಮಾಧ್ಯಮವನ್ನಾಗಿಟ್ಟುಕೊಂಡಿದ್ದಾರೆ.

**ನವವಿಧ ಭಕ್ತಿಗಳೆಂದರೆ** [11] : (ಆಯಾ ರೀತಿಯಲ್ಲಿ ಭಕ್ತಿ ಮಾಡಿದ ಒಬ್ಬಿಬ್ಬರು ಆದರ್ಶ ಪುರುಷರ ಹೆಸರುಗಳನ್ನು ಕೊಡಲಾಗಿದೆ)

1. **ಶ್ರವಣ ಭಕ್ತಿ** : ಭಗವಂತನಿಗೆ ಸಂಬಂಧಿಸಿದ ವಿಷಯಗಳನ್ನು, ಅವನ ಅನಂತ ಗುಣಗಳನ್ನು, ಅವನ ಚೆಲುವಿನ ವರ್ಣನೆಗಳನ್ನು ಶ್ರದ್ಧೆಯಿಂದ ಕೇಳುವುದು ಶ್ರವಣ ಭಕ್ತಿ – ಪರೀಕ್ಷಿತ ಮಹಾರಾಜರು.

2. **ಕೀರ್ತನ ಭಕ್ತಿ** : ಭಗವಂತನ ಅನಂತ ಗುಣಗಳನ್ನು ಹೇಳುವುದು, ಕೀರ್ತಿಸುವುದು, ಸ್ತುತಿಸುವುದು ಕೀರ್ತನ ಭಕ್ತಿ – ನಾರದ ಮುನಿಗಳು.

3. **ಸ್ಮರಣ ಭಕ್ತಿ** : ಶ್ರವಣ ಕೀರ್ತನಗಳಿಂದ ಸಂಗ್ರಹಿಸಿದ ಭಗವನ್ನಾಮ ರೂಪ ಗುಣಾದಿಗಳನ್ನು ಸ್ಮರಿಸುವುದು ಸ್ಮರಣ ಭಕ್ತಿ – ಭಕ್ತ ಪ್ರಹ್ಲಾದರು.

4. **ಪಾದ ಸೇವನ ಭಕ್ತಿ** : ನಿರ್ಮಲ ಮನಸ್ಸಿನಿಂದ ಶ್ರೀಹರಿಯ ಪಾದಗಳನ್ನೂ, ಸದ್ಗುರುಗಳ ಪಾದಗಳನ್ನೂ ಸೇವಿಸುವುದು ಪಾದಸೇವನ ಭಕ್ತಿ – ಲಕ್ಷ್ಮೀದೇವಿಯರು, ಶ್ರೀರಾಮಚಂದ್ರನ ಅನುಜ ಲಕ್ಷ್ಮಣ.

5. **ಅರ್ಚನ ಭಕ್ತಿ** : ಶುದ್ಧಾತ್ಮರಾಗಿ, ಶ್ರದ್ಧೆಯಿಂದ, ಶಾಸ್ತ್ರೋಕ್ತ ವಿಧಾನದಿಂದ ಭಗವಂತನಿಗೆ ಪೂಜೆ ಸಲ್ಲಿಸುವುದೇ ಅರ್ಚನ ಭಕ್ತಿ – ಅಂಬರೀಶ, ಪೃಥು ಮಹಾರಾಜರು.

6. **ವಂದನ ಭಕ್ತಿ** : ಭಗವಂತನಿಗೆ ನಮಸ್ಕರಿಸುವುದು ವಂದನ ಭಕ್ತಿ. ಅಂದರೆ, ಆ ಮೂಲಕ ಅವನಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸಿವುದು – ಕಂಸನ ಮಂತ್ರಿಗಳಲ್ಲೊಬ್ಬನಾದ ಅಕ್ರೂರ.

7. **ದಾಸ್ಯ ಭಕ್ತಿ** : ಭಗವಂತ ಹಾಗೂ ಭಕ್ತರಲ್ಲಿ ಸ್ವಾಮಿ–ಸೇವಕ ಭಾವವಿರುವುದು ದಾಸ್ಯ ಭಕ್ತಿ – ಹನುಮಂತದೇವರು.

8. **ಸಖ್ಯ ಭಕ್ತಿ** : ಭಗವಂತನನ್ನು ಭಕ್ತ ತನ್ನ ಗೆಳೆಯನೆಂದು ಭಾವಿಸಿ ಆರಾಧಿಸುವುದು ಸಖ್ಯ ಭಕ್ತಿ – ಅರ್ಜುನ, ಸುಧಾಮ.

9. **ಆತ್ಮ ನಿವೇದನ ಭಕ್ತಿ** : ಭಕ್ತ, ಭಗವಂತನಿಗೆ ತನ್ನನ್ನು ತಾನೇ ಅರ್ಪಿಸಿಕೊಳ್ಳುವುದು ಆತ್ಮ ನಿವೇದನ ಭಕ್ತಿ – ಬಲಿ ಚಕ್ರವರ್ತಿ.

## ಹರಿದಾಸರು ಸ್ವೀಕರಿಸುವ ದೀಕ್ಷೆ :

1. ಶ್ರುತಿ, ಸ್ಮೃತಿ, ಪುರಾಣ, ಇತಿಹಾಸ ಮುಂತಾದವುಗಳಲ್ಲಿ ಸಂಪೂರ್ಣ ನಂಬಿಕೆ ಇಡುವೆನೆಂದು ಪ್ರಮಾಣ ಮಾಡಬೇಕು.

2. 'ಸಾಲ ಮಾಡುವುದಿಲ್ಲ, ಸಾಲದೆನ್ನುವುದಿಲ್ಲ, ನಾಳೆಗಿಡುವುದಿಲ್ಲ' ಎಂಬ ಮೂರು ಮಾತುಗಳನ್ನೊಪ್ಪಿಕೊಳ್ಳಬೇಕು; ಸಾಲ ಮಾಡಬಾರದು, ಬಂದದ್ದರಲ್ಲೇ ತೃಪ್ತಿಯಾಗಿ ಇರಬೇಕು. ಹಾಗೆಯೇ ಮಾರನೆಯ ದಿನಕ್ಕೆ ತೆಗೆದಿಡುವಂತಿಲ್ಲ ಮತ್ತು ಮಾರನೆಯ ದಿನದ ಜೀವನ ಹೇಗೆ ನಡೆಯುವುದೆಂಬುದರ ಬಗ್ಗೆ ಯೋಚನೆ ಮಾಡಬಾರದು.

3. ಬಲವತ್ತರ ಕಾರಣಗಳಿದ್ದ ಹೊರತು ಹರಿದಿನ-ವ್ರತಾಚರಣೆಗಳನ್ನು ಬಿಡುವುದಿಲ್ಲ ಎಂದು ಪ್ರತಿಜ್ಞೆ ಮಾಡಬೇಕು.

4. ಹರಿನಿಂದೆ, ಹರಿಭಕ್ತರ ನಿಂದೆಗಳನ್ನು ಕೇಳಿದರೆ ಪರಿತಪಿಸಿ, ಆತ್ಮಶುದ್ಧಿಗಾಗಿ ಉಪವಾಸ ಮಾಡಬೇಕು; ಅಂದರೆ, ಬೇರೆಯವರು ಹರಿನಿಂದೆ ಅಥವಾ ಹರಿಭಕ್ತರ ನಿಂದನೆ ಮಾಡಿದರೆ, ಅದು ಇವರ ಕಿವಿಗೆ ಬಿದ್ದರೆ, ಇವರು ಪಶ್ಚಾತ್ತಾಪ ಪಟ್ಟು ಉಪವಾಸ ಮಾಡಬೇಕು.

5. ಹರಿನಾಮ ಸ್ಮರಣೆಯಿಂದ ಪ್ರಾಪ್ತವಾದ ಪವಿತ್ರಾನ್ನವನ್ನೇ ಉಣಬೇಕು. ಪ್ರತಿದಿನ ಕೊರಳಲ್ಲಿ ತುಳಸಿ ಮಾಲೆ ಧರಿಸಿ, ಹಣೆಗೆ ಗೋಪೀಚಂದನದ ನಾಮವಿಟ್ಟು, ತಂಬೂರಿ ಮೀಟುತ್ತಾ, ಅಂದುಗೆ ಕಿರುಗೆಜ್ಜೆ ತೊಟ್ಟು, ತಾಳ, ಚಿಟಿಕೆ, ಜೋಳಿಗೆ ಹಿಡಿದು, ಮನೆ-ಮನೆ, ಓಣಿ-ಬೀದಿಗಳಲ್ಲಿ ಕೀರ್ತನೆ ಹಾಡುತ್ತಾ, ಕುಣಿಯುತ್ತಾ ಸಂಚರಿಸಬೇಕು. ಹರಿದಾಸರು ಹೀಗೆ ಹೋಗುತ್ತಿರುವಾಗ ಜನರು ಅವರಾಗಿ ಕೊಡುವ ಆಹಾರ-ಸಾಮಗ್ರಿಗಳನ್ನು ಆಯಾ ದಿನಕ್ಕೆ ಬೇಕಾದಷ್ಟೇ ಸಂಗ್ರಹಣೆ ಮಾಡಿ ಬಳಸಿಕೊಳ್ಳಬೇಕು. ಈ ರೀತಿಯ ಭಿಕ್ಷೆಗೆ ಹೋಗುವುದೇ ಮಧುಕರವೃತ್ತಿ ಅಥವಾ ಯಾಯವಾರ ಎನ್ನುವುದು.

6. ಹರಿಸೇವೆಗಾಗಿ ತನ್ನ ಜೀವನವನ್ನು ಮೀಸಲಿಡಬೇಕು.

ತಮ್ಮ ದೀಕ್ಷೆಗೆ ಬದ್ಧರಾಗಿರುವುದರ ಜೊತೆಗೆ ಹರಿದಾಸರು ಸಾಮಾನ್ಯ ಜನರಂತೆ ಸಂಸಾರಿಗಳೂ ಆಗಿರಬಹುದು. ಆದರೆ ಸಾಂಸಾರಿಕ ಜೀವನಕ್ಕೆ ಅಂಟಿಕೊಂಡೂ ಅಂಟಿಕೊಳ್ಳದಂತಿರಬೇಕು. ಅಂದರೆ attachment with detachment; ತಮ್ಮ ಕುಟುಂಬದ ಜವಾಬ್ದಾರಿಯನ್ನು ನಿರ್ವಹಿಸುವಷ್ಟು ಮಾತ್ರ attachment – ಅಂಟಿಕೊಂಡಿರುವುದು; ಉಳಿದಂತೆ detachment – ಅಂಟಿಕೊಳ್ಳದಂತಿರುವುದು. ಇವರನ್ನು ವಿರಕ್ತ ಸಂಸಾರಿಗಳು ಅಥವಾ ಗೃಹಸ್ಥ ಸಂನ್ಯಾಸಿಗಳು ಎಂದೂ ಹೇಳಬಹುದು. ಹರಿದಾಸರ ಜೀವನದ ಬಹಳ ಮುಖ್ಯವಾದ ಒಂದು ಅಂಶವೆಂದರೆ, ಧರ್ಮ, ಮತ, ಆಚಾರ-ವಿಚಾರಗಳನ್ನು ಪಾಲಿಸಿ, ಸಮಾಜಮುಖಿಯಾದರೂ ಸಹಾ, ತಾವು ನಂಬಿದ ಸಿದ್ಧಾಂತಕ್ಕೆ ಯಾವುದೇ ರೀತಿಯಲ್ಲಿಯೂ ಚ್ಯುತಿ ಬರದಂತೆ ಇವುಗಳನ್ನು ತ್ಯಜಿಸದೆ ಬದುಕುವವರು.

# 2. ಹರಿದಾಸ ಸಾಹಿತ್ಯ ಅಂದರೇನು ?

ಹರಿದಾಸ ಸಾಹಿತ್ಯದ ಮಹತ್ವವನ್ನು ಕೀರ್ತಿಶೇಷರಾದ ಪರಮಪೂಜ್ಯ ಪೇಜಾವರ ಶ್ರೀ ವಿಶ್ವೇಶತೀರ್ಥರು ಹೀಗೆ ಹೇಳಿದ್ದಾರೆ : – "..............ಕೆಲವು ತಾತ್ತ್ವಿಕ ವಿಷಯಗಳು, ಅಭಿಮಾನಿ ದೇವತೆಗಳು, ಭಗವಂತನ ವಿಶೇಷ ರೂಪಗಳು, ದೈತ್ಯರ ವ್ಯಾಪಾರಗಳು ಮುಂತಾದ ಅಪೂರ್ವ ಪ್ರಮೇಯಗಳು ಶಾಸ್ತ್ರದ ಗ್ರಂಥಗಳಲ್ಲಿ ಸಿಗುವುದಿಲ್ಲ. ಅಂತಹ ಅಪೂರ್ವ ವಿಷಯಗಳು ಹರಿದಾಸ ಸಾಹಿತ್ಯದಲ್ಲಿ, ಅದರಲ್ಲೂ ಹರಿಕಥಾಮೃತಸಾರದಲ್ಲಿ ವಿಶೇಷವಾಗಿ ಬಂದಿದೆ. ಈ ವಿವರಣೆಗೆ ಸಾಕಷ್ಟು ಪ್ರಮಾಣಗಳಿವೆ. ಆದರೂ ಎಲ್ಲವೂ ನಮಗೆ ಉಪಲಬ್ದವಿಲ್ಲ. ಶಾಸ್ತ್ರ ಟಿಪ್ಪಣಿಕಾರರೂ ಬರೆದಿಲ್ಲ. ಹೀಗೆ ಸೂಕ್ಷ್ಮ ಪ್ರಮೇಯಗಳ ಹೆಚ್ಚಿನ ತಿಳುವಳಿಕೆ ಹರಿದಾಸ ಸಾಹಿತ್ಯದಿಂದ ದೊರೆಯುತ್ತದೆ" ಎಂದು ಹರಿದಾಸ ಸಾಹಿತ್ಯದ ಮಹತ್ವವನ್ನು ತಿಳಿಸಿದ್ದಾರೆ[12].

ಹರಿದಾಸ ಸಾಹಿತ್ಯವು ಪ್ರಧಾನವಾಗಿ ವೈಷ್ಣವ ಮತಾವಲಂಬಿಯಾಗಿರುತ್ತದೆ. "ಮನುಜನ ಐಹಿಕ ಹಾಗೂ ಪಾರತ್ರಿಕ ನೆಮ್ಮದಿಗೆ ಮುಖ್ಯ ಕಾರಣವಾಗುವಂಥದು ತತ್ತ್ವಜ್ಞಾನ. ಈ ತತ್ತ್ವಜ್ಞಾನ ಕೆಲವೇ ಕೆಲವು ಸಂಸ್ಕೃತಜ್ಞರಿಗೆ ಎಟಕುವಂತಾಗಿದ್ದು, ಅದನ್ನು ಮನೆಮನೆಗೆ ತಲುಪಿಸಿ, ಮನಮುಟ್ಟಿಸುವ ಕೆಲಸ ಹರಿದಾಸರುಗಳಿಂದ ನಡೆಯಿತು. ಪ್ರಾದೇಶಿಕವಾದ ಆಡುಭಾಷೆಯಲ್ಲಿ ಶಾಸ್ತ್ರದ ಸಾರವನ್ನು ತುಂಬಿಸಿ, ರಾಗ–ತಾಳಗಳೊಂದಿಗೆ ಹಾಡಿ ಹರಡಿದ ಈ ದಾಸರ ಸಾಧನೆ ಚಿಕ್ಕದಲ್ಲ. ಈ ಕನ್ನಡದ ನೆಲದಲ್ಲಿ ಆಚಾರ್ಯ ಮಧ್ವರು ಅವತರಿಸಿದರು; ತತ್ತ್ವವಾದವನ್ನು ಬೆಳಗಿದರು. ಕನ್ನಡದಲ್ಲೇ ದಾಸಸಾಹಿತ್ಯ ಬೆಳೆದುದಕ್ಕೆ ಇದೂ ಒಂದು ಕಾರಣ".[13] ಯಾವುದೇ ವಿಷಯವನ್ನು ಆಡುಭಾಷೆಯಲ್ಲಿ ತಿಳಿಸಿದರೆ ಜನರ ಮನಸ್ಸಿಗೆ ಬೇಗ ನಾಟುವುದು, ಅಲ್ಲದೆ ಹಾಡುವುದು ಮನುಷ್ಯರ ಒಂದು ಸಹಜವಾದ ಗುಣವಾದ್ದರಿಂದ ಅದು ಅನೇಕ ಕಾಲ ಅವರ ನೆನಪಿನಲ್ಲಿ ಉಳಿಯುವುದು ಎಂದು ತಿಳಿದು ತತ್ತ್ವಜ್ಞಾನ ಪ್ರಸಾರವನ್ನು, ಹರಿಯ ಮಹತ್ತ್ವವನ್ನು ಮತ್ತು ಮಹಿಮೆಗಳನ್ನು ಹೊಗಳಿ ಕೀರ್ತನೆಗಳ ಮೂಲಕ ಜನಸಾಮಾನ್ಯರಿಗೆ ಮುಟ್ಟಿಸುವ ಮಹಾನ್ ಚಳುವಳಿಯು ಹರಿದಾಸರಿಂದ ನಡೆಯಿತು. "ತಾವು ನುಡಿದಂತೆ ನಡೆದು ತಮ್ಮ ಜೀವನಾನುಭವಗಳನ್ನು ಇತರರೊಂದಿಗೆ ತಮ್ಮ ರಚನೆಗಳ ಮೂಲಕ ಹಂಚಿಕೊಳ್ಳುತ್ತಾರೆ".[14] ಹರಿದಾಸ ಸಾಹಿತ್ಯವು ಬಹಳ ವಿಶಾಲವಾದ ಮತ್ತು ವ್ಯಾಪಕವಾದ ಸಾಹಿತ್ಯ; ಭಕ್ತಿ ಮತ್ತು ದೈನಂದಿನ ಜೀವನದ ಅನೇಕ ವಿಷಯಗಳನ್ನು ಒಳಗೊಂಡಿದೆ. ಜನಸಮುದಾಯದ ನಡುವೆಯೇ ಬದುಕಿ, ಸಾಮಾನ್ಯ ಜನರಿಗೆ ಜೀವನದ ಮೌಲ್ಯಗಳು, ಸದ್ಗುಣ, ನೈತಿಕತೆಯನ್ನು ತಿಳಿಸಿ, ಅವರಿಗೆ ಪ್ರಾಮಾಣಿಕತೆ ಮತ್ತು ಭಕ್ತಿಯನ್ನು ಜೀವನದಲ್ಲಿ ಅನುಸರಿಸಲು ಪ್ರೇರೇಪಿಸಿ ಸಮಾಜದ ಉದ್ಧಾರಕ್ಕೂ ಕಾರಣರಾಗಿದ್ದಾರೆ.

ಹರಿದಾಸ ಸಾಹಿತ್ಯವು ಪ್ರಮುಖವಾಗಿ ಕೀರ್ತನ ಪ್ರಕಾರದಲ್ಲಿ ರಚನೆಯಾದಂತಹವು. ಪುರಂದರದಾಸರು 4,25,000 ಕೃತಿಗಳನ್ನು, ವಿಜಯದಾಸರು 75,000 ಕೃತಿಗಳನ್ನು ರಚಿಸಿದ್ದರೆಂದು ಹೇಳಲಾಗಿದೆ. ಈ ಸಂಖ್ಯೆಯನ್ನು ಗಮನಿಸಿದರೆ, ಅವರ ನಂತರ ಬಂದ ಹರಿದಾಸರುಗಳು ಕೂಡ ಸಾವಿರಾರು ಕೃತಿಗಳನ್ನು ರಚಿಸಿರಬಹುದೆಂದು ಹೇಳಬಹುದು. ಆದ್ದರಿಂದ ರಚನೆಯಾದ ಎಲ್ಲ ಕೃತಿಗಳು ಲಭ್ಯವಿದ್ದಿದ್ದರೆ, ಅವುಗಳ ಸಂಖ್ಯೆ ಲಕ್ಷಾಂತರವಾಗುತ್ತಿತ್ತು. ಆದರೆ ಇಂದು ಲಭ್ಯವಿರುವುದು ಸಾವಿರಾರು ಮಾತ್ರ; ಸಂಶೋಧನೆ ನಡೆದರೆ ಇನ್ನೂ ಹೆಚ್ಚಿನ ಸಂಖ್ಯೆಯ ಕೀರ್ತನೆಗಳು ದೊರೆಯಬಹುದು.

ಹರಿದಾಸರು ನೂರಾರು ವಿಷಯಗಳ ಮೇಲೆ ರಚನೆಗಳನ್ನು ಮಾಡಿದ್ದಾರೆ. ಇವುಗಳ ವಸ್ತು (topic/subject) ಬೇರೆ ಬೇರೆ ಎಂಬಂತೆ ಕಂಡರೂ ಎಲ್ಲ ರಚನೆಗಳ ಉದ್ದೇಶ ಮತ್ತು ವಸ್ತು ಹರಿಭಕ್ತಿಯೇ ಆಗಿರುತ್ತದೆ. ಪ್ರತಿಯೊಂದು ರಚನೆಯಲ್ಲೂ ಒಂದು ಉದ್ದೇಶವಿರುತ್ತದೆ. ಹರಿದಾಸರ ರಚನೆಗಳನ್ನು ಅವುಗಳ ವಿಷಯದ ಆಧಾರದ ಮೇಲೆ ವಿಂಗಡಿಸಬಹುದು : – ಹರಿದಾಸರು, ಯತಿಗಳು, ನದಿಗಳು, ನಂತರ ದೇವತೆಗಳು, ಶ್ರೀಹರಿ ಸಂಕೀರ್ತನೆಗಳು, ಅವನ ಅನೇಕ ಅವತಾರಗಳನ್ನು ಕುರಿತ ರಚನೆಗಳು, ಆರತಿ, ಮಂಗಳ ಮತ್ತು ಜೋಗುಳ ಪದಗಳು; ಜೊತೆಗೆ ತತ್ತ್ವವಿವೇಚನೆ, ಪೌರಾಣಿಕ ವಿಷಯಗಳು, ಲೋಕನೀತಿ, ಆತ್ಮನಿವೇದನೆ, ವಿಶೇಷ ಕೃತಿಗಳು ಮತ್ತು ದೀರ್ಘ ಕೃತಿಗಳನ್ನೂ ಗುರುತಿಸಬಹುದು. ಇವಲ್ಲದೆ ಮಹಿಳಾ ಹರಿದಾಸರ ರಚನೆಗಳಲ್ಲಿ ಸಂಪ್ರದಾಯದ ಹಾಡುಗಳು, ಉರುಟಣೆ, ಆರತಿ, ಹಸೆಗೆ ಕರೆಯುವ ಹಾಡುಗಳನ್ನು ಕಾಣಬಹುದು. ಹರಿದಾಸರು ತಮ್ಮ ಕೀರ್ತನೆಗಳಲ್ಲಿ ಭಗವಂತನ ಮಹಿಮೆಗಳನ್ನು ತಿಳಿಸುವಾಗ ವೇದ, ಪುರಾಣ, ಇತಿಹಾಸ, ಭಾರತ, ಭಾಗವತ, ರಾಮಾಯಣಗಳ ಕಥೆ ಉಪಕಥೆಗಳು ಸಹಜವಾಗಿ ಪ್ರಧಾನ ಪಾತ್ರ ವಹಿಸಿವೆ. ಶ್ರೀಹರಿಯೇ ಸರ್ವೋತ್ತಮನೆಂದು ನಂಬಿದ್ದರೂ, ಹರಿದಾಸರು ಅನ್ಯ ದೈವಗಳ ಬಗ್ಗೆಯೂ ನೂರಾರು ರಚನೆಗಳನ್ನು ಮಾಡಿದ್ದಾರೆ.

ಒಟ್ಟಿನಲ್ಲಿ ಲೌಕಿಕದಲ್ಲಿದ್ದು ತತ್ತ್ವಜ್ಞಾನದಲ್ಲಿ ಆಸಕ್ತರಾಗಿದ್ದರೂ ಸಹಾ ಸಂಸ್ಕೃತ ಭಾಷೆಯ ಜ್ಞಾನವಿಲ್ಲದ ಜನಸಾಮಾನ್ಯರಲ್ಲಿ ಕೀರ್ತನೆ, ಉಗಾಭೋಗ, ಸುಳಾದಿ ಮುಂತಾದವುಗಳ ಮೂಲಕ ಸರಳ ಕನ್ನಡದಲ್ಲಿ ತತ್ತ್ವಜ್ಞಾನವನ್ನು ಪ್ರಸಾರ ಮಾಡುವುದರ ಜೊತೆಗೆ ಸಮಾಜದ ಓರೆ ಕೋರೆಗಳನ್ನೂ ಗುರುತಿಸಿ, ಟೀಕಿಸಿ, ಸಮಾಜಸುಧಾರಣೆಗೆ ತಮ್ಮ ಕೊಡುಗೆಯನ್ನು ನೀಡಿರುವುದು ಶ್ರೀ ಹರಿದಾಸರುಗಳ ವೈಶಿಷ್ಟ್ಯವಾಗಿದೆ.

**ಗುರು ಶಿಷ್ಯ ಪರಂಪರೆ :** ಹರಿದಾಸ ಸಾಹಿತ್ಯದ ಒಂದು ಮುಖ್ಯವಾದ ಅಂಶವೆಂದರೆ ಗುರು ಶಿಷ್ಯ ಪರಂಪರೆ. ಗುರುಗಳಿಂದ ಶಿಷ್ಯನಿಗೆ ನೀಡುವ ದೀಕ್ಷೆ, ಅಂಕಿತ ಪ್ರದಾನಗಳ ವಿವರಗಳನ್ನು ಮತ್ತು ಇಂಥಹ ಅನೇಕ ಪರಂಪರೆಗಳ ಬಗ್ಗೆ ಈ ಗ್ರಂಥದ ಮುಂದಿನ ಭಾಗಗಳಲ್ಲಿ ತಿಳಿಸಲಾಗಿದೆ.

# 3. ಹರಿದಾಸ ಸಾಹಿತ್ಯದಲ್ಲಿ ಅಂಕಿತ

ಹರಿದಾಸ ಸಾಹಿತ್ಯದಲ್ಲಿ ಅಂಕಿತವೆಂಬುದು ಬಹಳ ಮುಖ್ಯವಾದ ಅಂಶ. ಇದರ ಬಳಕೆ ಹರಿದಾಸರಲ್ಲಿ ಒಂದು ಪರಂಪರೆಯಾಗಿ ಉಳಿದುಬಂದಿದೆ. ಅಂಕಿತವು ಒಬ್ಬ ಗುರುವು ಶಿಷ್ಯನಿಗೆ ಉಪಾಸನೆಗಾಗಿ ಉಪದೇಶಪೂರ್ವಕವಾಗಿ ಸೂಚಿಸುವ ಶ್ರೀಹರಿಯ ಒಂದು ನಾಮವೋ, ರೂಪವೋ ಆಗಿದ್ದು, ಶಿಷ್ಯನು ಆ ನಾಮ ಅಥವಾ ರೂಪವುಳ್ಳ ಶ್ರೀಹರಿಯ ದಾಸನೆನಿಸುತ್ತಾನೆ. ಅಂಕಿತ ಪಡೆದಂದಿನಿಂದ ಅವನು 'ಹರಿದಾಸ'ನೆನಿಸುತ್ತಾನೆ; ಅಂದುಗೆ ಕಿರುಗೆಜ್ಜೆ ತೊಟ್ಟು, ತಾಳ ತಂಬೂರಿ, ಚಿಟಿಕೆ ಮತ್ತು ಜೋಳಿಗೆ ಹಿಡಿಯ ಬೇಕು. ಅಂಕಿತ ಉಪದೇಶ, ಸಾಮಾನ್ಯವಾಗಿ ಒಂದು ಕೀರ್ತನೆಯ ರೂಪದಲ್ಲಿ ಇರುತ್ತದೆ. ಅಂತಹ ಕೀರ್ತನೆಯನ್ನು 'ಅಂಕಿತಪದ'ವೆಂದು ಕರೆಯಲಾಗುವುದು. ಪಲ್ಲವಿಯಲ್ಲಿ ಗುರು ತನ್ನ ಶಿಷ್ಯನಿಗೆ ಕೊಡಲಿರುವ ಅಂಕಿತವಿದ್ದು, ಕೊನೆಯ ನುಡಿಯಲ್ಲಿ ಇತರ ಕೀರ್ತನೆಗಳಂತೆ ಗುರುವಿನ ಅಂಕಿತವಿರುತ್ತದೆ. ತಂದೆ ಮುದ್ದುಮೋಹನವಿಠಲದಾಸರು ತಮ್ಮ ಶಿಷ್ಯ ರಮಾಕಾಂತವಿಠಲದಾಸರಿಗೆ ನೀಡಿದ ಅಂಕಿತ ಪದ ಹೀಗಿದೆ:

**ರಮಾಕಾಂತವಿಠಲ**ನೆ ನೀನಿವನ ಸಲಹ ಬೇಕೋ ಹರಿಯೇ ।ಪ।

ದೀನನಾಥನೆ ಕೈಪಿಡಿದು ಕಾಪಾಡೋ ಹರಿಯೇ
ಮನ್ಮನೋರಥದಾತ ಸ್ವಾಮಿ ಶ್ರೀಹರಿಯೆ ಕಾಪಾಡಬೇಕಿವನ ।ಅ.ಪ।

ಹರಿಗುರು ಭಕ್ತಿ ಮೊದಲಾದ ಸದ್ಗುಣವನೇ ಕೊಟ್ಟು
ಪರಮದಯದಿಂದ ಇಹಪರದಿ ಕಾಪಾಡೋ ಹರಿಯೇ
ಕರಿವರದ ಕಾಮಿತಾರ್ಥವನಿತ್ತು
ಕರುಣದಿಂದಲಿ ಕಾಪಾಡು ಹರಿಯೇ ।1।

ದೋಷದೂರನೆ ಕೃಷ್ಣ ಶೇಷಗಿರಿವಾಸ ಕೃಪಾಸಾಂದ್ರ
ನೀ ಸಲಹಬೇಕೋ ಹರಿಯೇ
ಶೇಷಪರ್ಯಂಕ ಶಯನ ಶ್ರೀಹರಿಯೆ ಸಂ –
ತೋಷವನೆ ಕೊಟ್ಟು ನೀ ಕಾಪಾಡೋ ಹರಿಯೇ ।2।

ಧರ್ಮಕಾಮಾರ್ಥ ಮೊದಲಾದ ಪುರುಷಾರ್ಥವನೆ ಕೊಟ್ಟು
ಸನ್ಮುದದಿ ಕಾಯೋ ಹರಿಯೇ

ಮಮ ಸ್ವಾಮಿ ಕೈವಲ್ಯದಾಯಕ **ತಂದೆಮುದ್ದುಮೋಹನವಿಠಲ**ನೇ ನೀನಿವನ
ನಿರ್ಮಲ ಮನದಿ ನಿಂತು ಧರ್ಮಪ್ರೇರಕನಾಗಿ ಸಲಹೋ ಹರಿಯೇ । 3 ।

ಅಂಕಿತ ಪಡೆದಂದಿನಿಂದ ಶಿಷ್ಯನು ಅಧಿಕೃತವಾಗಿ 'ಹರಿದಾಸನಾಗುತ್ತಾನೆ'. ಹರಿದಾಸ ಪರಂಪರೆಯ ಎಲ್ಲ ಹರಿದಾಸರ ಅಂಕಿತಪದಗಳೂ ದೊರೆತಿಲ್ಲ. ಈವರೆಗೆ ದೊರೆತಿರುವ ಅಂಕಿತಪದಗಳ ಸಂಖ್ಯೆ ಬಹಳ ಕಡಿಮೆ. ಹರಿದಾಸರ ಅಂಕಿತವು ಹೆಚ್ಚಾಗಿ ಅವರವರ ಇಷ್ಟದೈವದ ಹೆಸರೇ ಆಗಿರುತ್ತದೆ. ಯತಿಗಳ ಅಂಕಿತ ಅವರ ಉಪಾಸ್ಯ ಮೂರ್ತಿಯ ಹೆಸರೂ ಆಗಿರಬಹುದು. ಕೆಲವು ಹರಿದಾಸರಿಗೆ ತಮ್ಮ ಗುರುಗಳಿಂದ ಸ್ವಪ್ನಸೂಚನೆಯಿಂದ ಅಂಕಿತ ಪ್ರದಾನವಾಗಿರುವುದು ಉಂಟು. ವಿಜಯದಾಸರು ಪುರಂದರದಾಸರ ಸ್ವಪ್ನಾಂಕಿತ ಶಿಷ್ಯರು. ಅಂತೆಯೇ ಹರಪನಹಳ್ಳಿ ಭೀಮವ್ವನವರಿಗೆ ಸ್ವಪ್ನದಲ್ಲಿ ನಾರದರೆಂದು ಭಾವಿಸಿದ ಒಬ್ಬ ಬ್ರಾಹ್ಮಣನಿಂದ 'ಭೀಮೇಶಕೃಷ್ಣ'ಎಂಬ ಅಂಕಿತ ಪ್ರಾಪ್ತವಾಯಿತೆಂದು ಹೇಳಲಾಗಿದೆ. ಜಗನ್ನಾಥದಾಸರು ಗುರುಗಳ ಸೂಚನೆಯಂತೆ ಪಂಢರಾಪುರಕ್ಕೆ ಹೋಗಿ ಅಲ್ಲಿಯ ಚಂದ್ರಭಾಗಾ ನದಿಯಲ್ಲಿ ಸ್ನಾನಮಾಡುವಾಗ **"**ಜಗನ್ನಾಥವಿಠಲ**"** ಎಂದು ದೇವನಾಗರೀ ಅಕ್ಷರಗಳಲ್ಲಿ ಕೆತ್ತಿದ್ದ ಶಿಲಾಫಲಕವೊಂದು ಅವರ ಕೈಗೆ ಸಿಕ್ಕಿ, ಅದರಿಂದ **"ಜಗನ್ನಾಥವಿಠಲ"** ಎಂಬ ಅಂಕಿತವನ್ನು ಸ್ವೀಕರಿಸಿರುತ್ತಾರೆಂದು ಹೇಳಲಾಗಿದೆ. ಅನೇಕ ದಾಸರು ಅಂಕಿತವನ್ನು ತಮ್ಮ ಆರಾಧ್ಯ ದೇವತೆಗಳ ಹೆಸರಿನಲ್ಲಿ ತಾವೇ ಸ್ವೀಕರಿಸಿದ್ದಾರೆ. ಹೆಚ್ಚಿನ ಹರಿದಾಸರ ಅಂಕಿತದಲ್ಲಿ 'ವಿಠಲ' ಎಂಬ ಶಬ್ದ ಸೇರಿರುತ್ತದೆ. ಈ ವಿಠಲ, ಪಂಡರಾಪುರದ ಪಾಂಡುರಂಗ ವಿಠಲ. ಉದಾಹರಣೆಗೆ : ರಂಗವಿಠಲ, ಪುರಂದರವಿಠಲ, ವಿಜಯವಿಠಲ, ಗೋಪಾಲವಿಠಲ, ಜಗನ್ನಾಥವಿಠಲ. ಇದಲ್ಲದೆ ಅಂಕಿತಪ್ರದಾನ ಮಾಡಿದ ಗುರುವಿನ ಅಂಕಿತಕ್ಕೆ ಮೊದಲು 'ಸಿರಿ', 'ತಂದೆ', 'ಗುರು', 'ಮುದ್ದು', 'ವರದ', 'ಅಭಿನವ' 'ಶ್ರೀಶ' ಇತ್ಯಾದಿ ಪದಗಳನ್ನು ಸೇರಿಸಿಕೊಂಡಿರುವುದು ಉಂಟು. ಉದಾಹರಣೆಗೆ, ಸಿರಿವೇಣುಗೋಪಾಲ, ತಂದೆಪುರಂದರ, ಗುರುಪ್ರಾಣೇಶ, ಮುದ್ದುಮೋಹನ, ವರದಗೋಪಾಲ, ಅಭಿನವಜನಾರ್ದನ, ಶ್ರೀಶಪ್ರಾಣೇಶ. ಸಾಮಾನ್ಯವಾಗಿ ಅಂಕಿತವು ಕೀರ್ತನೆಯ ಕೊನೆಯ ಸಾಲಿನಲ್ಲಿ ಅಥವಾ ಕೊನೆಯ ನುಡಿಯ ಯಾವುದಾದರೊಂದು ಸಾಲಿನಲ್ಲಿ ಬರುತ್ತದೆ. ಉಗಾಭೋಗಗಳಲ್ಲಿ ಕೊನೆಯ ಸಾಲುಗಳಲ್ಲಿ ಬರುತ್ತದೆ, ಸುಳಾದಿಗಳಲ್ಲಿ ಅಂಕಿತವು ಪ್ರತಿಯೊಂದು ನುಡಿಯಲ್ಲೂ ಮತ್ತು ಜತೆಯಲ್ಲೂ ಬರುತ್ತದೆ.

ಇತ್ತೀಚಿನ ಹರಿದಾಸರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಂಕಿತ ಪ್ರದಾನ ಮಾಡಿದವರೆಂದರೆ ದೇವರಾಯನದುರ್ಗದ ತಂದೆಮುದ್ದುಮೋಹನವಿಠಲದಾಸರು (1165 ಶಿಷ್ಯರಿಗೆ), ಚಿತ್ರದುರ್ಗದ ಉರಗಾದ್ರಿವಾಸವಿಠಲದಾಸರು (200ಕ್ಕೂ ಹೆಚ್ಚಿನ ಶಿಷ್ಯರಿಗೆ) ಮತ್ತು ಮೈಸೂರಿನ ಗುರುಗೋವಿಂದವಿಠಲದಾಸರು (254 ಶಿಷ್ಯರಿಗೆ). ಅನೇಕ ಹರಿದಾಸರು

ಬೇರೆಯವರಿಗೆ ಅಂಕಿತ ಪ್ರದಾನ ಮಾಡಿದ್ದರೂ, ಎಲ್ಲ ದಾಸರೂ ಅಂಕಿತ ಪ್ರದಾನ ಮಾಡಿರುವಂತೆ ಕಾಣುವುದಿಲ್ಲ. ಅಂಕಿತದಿಂದ ಹರಿದಾಸರಿಗೆ ಮಾನ್ಯತೆ ಅಥವಾ ಪ್ರಚಾರ ಬೇಕಾಗಿಲ್ಲ. ಕೀರ್ತನೆಯ ಕೊನೆಯಲ್ಲಿ ಅಂಕಿತವನ್ನು ಅಳವಡಿಸಿ ಆ ಮೂಲಕ ತಮ್ಮ ರಚನೆಯನ್ನು ತಮ್ಮ ಇಷ್ಟದೈವಕ್ಕೆ ಅರ್ಪಿಸುತ್ತಾರೆ. ಆಯಾ ಅಂಕಿತದಿಂದ ನಾವುಗಳು ಇಂತಹವರ ಕೀರ್ತನೆ ಎಂದು ಗುರುತಿಸುತ್ತೇವೆ.

**ಅಂಕಿತಪಲ್ಲಟ** : ಒಂದೇ ಕೀರ್ತನೆಯು ಬೇರೆ ಬೇರೆ ಅಂಕಿತಗಳಲ್ಲಿ, ಅಂದರೆ ಬೇರೆ ಬೇರೆ ಹರಿದಾಸರ ರಚನೆಗಳೆಂದು ಕಾಣಸಿಗುವುದು. ಇದು ನೂರಾರು ಕೀರ್ತನೆಗಳಲ್ಲಿ ಆಗಿರುವ ಗೊಂದಲ. ಶ್ರೀಪಾದರಾಜರಿಂದ ಮೊದಲಾಗಿ ನಮ್ಮೆಲ್ಲ ಪ್ರಮುಖ ಹರಿದಾಸರ ಕೀರ್ತನೆಗಳೂ ಈ ರೀತಿಯ ಮಾಪಾರ್ಡುಗಳಿಗೆ ಒಳಗಾಗಿವೆ. ಶ್ರೀಪುರಂದರದಾಸರ ಹಾಗೂ ಶ್ರೀಕನಕದಾಸರ ಕೀರ್ತನೆಗಳಲ್ಲಿ ಹೆಚ್ಚಾಗಿ ಅಂಕಿತಪಲ್ಲಟ ಕಂಡುಬಂದರೂ ಇತರ ದಾಸರುಗಳ ಅಂಕಿತದಲ್ಲೂ ಕಾಣಸಿಗುವುದು. ಉದಾಹರಣೆಗೆ : 'ಅಂತರಂಗದಲಿ ಹರಿಯ ಕಾಣದವ ತಾ ಹುಟ್ಟು ಕುರುಡನೋ' – ಶ್ರೀವ್ಯಾಸರಾಯರ ಮತ್ತು ಪುರಂದರದಾಸರ ಅಂಕಿತದಲ್ಲಿ; 'ಅಕ್ಕ ನಂದಗೋಪನ ಅರಮನೆಯೊಳಗೊಬ್ಬ' – ಶ್ರೀಪುರಂದರದಾಸರ ಮತ್ತು ಶ್ರೀವಾದಿರಾಜರ ಅಂಕಿತದಲ್ಲಿ; 'ಕಾಳ ಬೆಳದಿಂಗಳು ಈ ಸಂಸಾರ ಕತ್ತಲೆ ಬೆಳದಿಂಗಳು' – ಶ್ರೀಶ್ರೀಪಾದರಾಜರ ಮತ್ತು ಶ್ರೀಪುರಂದರದಾಸರ ಅಂಕಿತದಲ್ಲಿ; 'ಭಕುತ ಜನ ಮುಂದೆ ನೀನವರ ಹಿಂದೆ' – ಶ್ರೀಪುರಂದರದಾಸರ ಮತ್ತು ಶ್ರೀವಿಜಯದಾಸರ ಅಂಕಿತದಲ್ಲಿ; 'ಸಂಗವಾಗಲಿ ಸಾಧು ಸಂಗವಾಗಲಿ' – ಶ್ರೀವ್ಯಾಸರಾಯರ ಮತ್ತು ಶ್ರೀಪ್ರಸನ್ನವೆಂಕಟದಾಸರ ಅಂಕಿತದಲ್ಲಿ. ಈ ಗೊಂದಲವನ್ನು ಹೆಚ್ಚಿಸಿರುವ ಬೇರೆಯ ಕಾರಣಗಳೂ ಇವೆ. ಕೆಲವು ಹರಿದಾಸರು ಅನೇಕ ಅಂಕಿತಗಳಲ್ಲಿ ರಚನೆ ಮಾಡಿರುವುದು, ಅಂಕಿತಪ್ರದಾನಕ್ಕೆ ಮೊದಲು ಬೇರೆ ಅಂಕಿತದಲ್ಲಿ ರಚನೆ ಮಾಡಿರುವುದು, ಒಂದೇ ಹೆಸರಿನಂತೆ ತೋರುವ ಅಥವಾ ಹೋಲುವ ಹಲವು ಅಂಕಿತಗಳಿರುವುದು. ಹೀಗಿರುವಾಗ ಒಬ್ಬರ ರಚನೆ ಮತ್ತೊಬ್ಬರ ರಚನೆಗಳೊಂದಿಗೆ ಸೇರಿಕೊಂಡಿರುವ ಸಾಧ್ಯತೆ ಇದೆ.



# 4. ಹರಿದಾಸ ಸಾಹಿತ್ಯದ ಉಗಮ ಕಾಲ ಮತ್ತು ಮೊದಲನೆಯ ಘಟ್ಟ

ಶ್ರೀ ವಾಯುದೇವರ ಹನುಮ–ಭೀಮರ ನಂತರದ ಮೂರನೆಯ ಅವತಾರವಾದ ಶ್ರೀ ಮಧ್ವಾಚಾರ್ಯರು ಕರ್ನಾಟಕದ ಉಡುಪಿ ಜಿಲ್ಲೆಯ ಪಾಜಕದಲ್ಲಿ ಜನಿಸಿ 13ನೆಯ ಶತಮಾನದಲ್ಲಿ ತಮ್ಮ ದ್ವೈತ ಸಿದ್ಧಾಂತವನ್ನು ಸಾರಿದ್ದರು. ಕನ್ನಡದಲ್ಲೇ ದಾಸ ಸಾಹಿತ್ಯ ಬೆಳೆದುದಕ್ಕೆ ಇದೂ ಒಂದು ಕಾರಣ. ಅವರು ರಚಿಸಿದ ದ್ವಾದಶ ಸ್ತೋತ್ರಗಳು ಹರಿದಾಸ ಸಾಹಿತ್ಯಕ್ಕೆ ಮೂಲ ಎಂದು ಹೇಳಲಾಗಿದೆ. ಶ್ರೀ ಮಧ್ವಾಚಾರ್ಯರ ಆದೇಶದಂತೆ ಅವರು ಅದೃಶ್ಯರಾದ ನಂತರ, ಅವರ ನೇರವಾದ ನಾಲ್ಕು ಶಿಷ್ಯರುಗಳಾದ ಶ್ರೀ ಪದ್ಮನಾಭತೀರ್ಥರು, ಶ್ರೀ ನರಹರಿತೀರ್ಥರು, ಶ್ರೀ ಮಾಧವತೀರ್ಥರು ಮತ್ತು ಶ್ರೀ ಅಕ್ಷೋಭ್ಯತೀರ್ಥರು ಸರದಿಯ ಪ್ರಕಾರ ಶ್ರೀ ಮಧ್ವಾಚಾರ್ಯರ ಪೀಠವನ್ನು ಅಲಂಕರಿಸಿದರು. ಇವರುಗಳಲ್ಲಿ ಶ್ರೀ ನರಹರಿತೀರ್ಥರು (ಆಶ್ರಮ ಕಾಲ ಕ್ರಿ.ಶ. 1324–33) ಕನ್ನಡದಲ್ಲಿ ರಚಿಸಿದ ಕೆಲವು ಕೀರ್ತನೆಗಳು ದೊರೆತಿವೆ.

ಇಲ್ಲಿ ತಿಳಿಸಬೇಕಾದ ಒಂದು ಮುಖ್ಯವಾದ ವಿಷಯವೆಂದರೆ ಸುಮಾರು 9ನೇ ಶತಮಾನದಲ್ಲಿ **ಅಚಲಾನಂದವಿಠಲ**ರೆಂಬ ಹರಿದಾಸರಿದ್ದರೆಂದೂ, ಅವರ ಅನೇಕ ರಚನೆಗಳು ದೊರೆತಿವೆಯಂದೂ, ಹರಿದಾಸ ಸಾಹಿತ್ಯದ ಪ್ರಸಿದ್ಧ ವಿದ್ವಾಂಸರಾದ ಶ್ರೀ ಬೇಲೂರು ಕೇಶವದಾಸರು ತಮ್ಮ 'ಕರ್ನಾಟಕ ಭಕ್ತ ವಿಜಯ' ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ. ಆದರೆ ಇದು ಸರಿಯಲ್ಲವೆಂದೂ, 9ನೇ ಶತಮಾನದ ಅಚಲಾನಂದರು ಒಬ್ಬ ಯತಿಗಳು ಹಾಗೂ ಪೀಠಾಧಿಪತಿಗಳು; ಅವರದೆಂದು ಹೇಳಲಾದ ಅಚಲಾನಂದವಿಠಲವೆಂಬ ಅಂಕಿತದಲ್ಲಿ ದೊರೆತಿರುವ ರಚನೆಗಳು 15–16ನೇ ಶತಮಾನದ ಭಾಷೆಯಲ್ಲಿವೆ. ಆದ ಕಾರಣ ಅವು 15–16ನೇ ಶತಮಾನದಲ್ಲಿದ್ದ ಅಚಲಾನಂದವಿಠಲರ ರಚನೆಗಳು ಎಂದು ಖಚಿತವಾಗಿದೆ. ಈ ಅಚಲಾನಂದರ 6 ಕೀರ್ತನೆಗಳು, 44 ಉಗಾಭೋಗಗಳು ಮತ್ತು 4 ಸುಳಾದಿಗಳು ದೊರೆತಿವೆ.

ಮತ್ತೊಂದು ಮುಖ್ಯವಾದ ವಿಷಯವೆಂದರೆ, **"ಆದ್ಯರು"** ಮತ್ತು **"ಆರಾಧ್ಯರ"** ಬಗ್ಗೆ.

**"ಆದ್ಯರು"** : ಇವರು ಒಟ್ಟು ಅರವತ್ತು ಜನ ಎಂದು ಹೇಳಲಾಗಿದೆ. ಶ್ರೀ ನರಹರಿತೀರ್ಥರ ಸಮಕಾಲೀನರು ಎಂಬ ಒಂದು ಹೇಳಿಕೆಯಿದೆ. ಮತ್ತೊಂದು ಹೇಳಿಕೆಯ ಪ್ರಕಾರ ಪುರಂದರದಾಸರ ಹಿಂದಿನವರು ಅಥವಾ ಸಮಕಾಲೀನರೆಂದು ಅಥವಾ ಪುರಂದರದಾಸರು ಮತ್ತು ವಿಜಯದಾಸರ ಕಾಲಗಳ ಮಧ್ಯದಲ್ಲಿ ಇದ್ದವರೆಂದು ಅಭಿಪ್ರಾಯವಿದೆ. ಆದ್ಯರು ರಚಿಸಿರುವ ಅನೇಕ ಕೀರ್ತನೆಗಳು ದೊರೆತಿವೆ.[15]

**"ಆರಾಧ್ಯರು"** : ಇವರ ಬಗ್ಗೆ ಹೆಚ್ಚಿನ ವಿವರ ಈ ಗ್ರಂಥದ ಲೇಖಕನಿಗೆ ದೊರೆತಿಲ್ಲ. ಆದರೆ ಇವರು ಒಂಬತ್ತು ಜನರೆಂದೂ, ಆದ್ಯರಿಂದ ಬೇರೆಯವರೆಂದೂ ತಿಳಿದಿದೆ. ಇವರಲ್ಲಿ ಪ್ರಾಣನಾಥವಿಠಲರೆಂಬ ಒಬ್ಬರ ಹೆಸರು ಮಾತ್ರ ದೊರೆತಿದೆ.[15]

ಶ್ರೀ ಪದ್ಮನಾಭತೀರ್ಥರ ಪರಂಪರೆಯಲ್ಲಿ ಯತಿಗಳಾಗಿ ಬಂದ ಶ್ರೀ ಶ್ರೀಪಾದರಾಜರಿಂದ ಹರಿದಾಸ ಸಾಹಿತ್ಯಕ್ಕೆ ಒಂದು ನಿರ್ದಿಷ್ಟವಾದ ರೂಪ ದೊರೆಯಿತು. ಕರ್ನಾಟಕದ ರಾಮನಗರ ಜಿಲ್ಲೆಗೆ ಸೇರಿದ ಅಬ್ಬೂರು ಗ್ರಾಮದಲ್ಲಿ ಕ್ರಿ.ಶ. ಸುಮಾರು 1409ರಲ್ಲಿ ಜನಿಸಿದ ಇವರ ಜನ್ಮನಾಮ ಲಕ್ಷ್ಮೀನಾರಾಯಣ. ಇವರ ಸಂಸ್ಥಾನ ತಮಿಳು ನಾಡಿನ ಶ್ರೀರಂಗದಲ್ಲಿದ್ದಾಗ, ಅಲ್ಲಿನ ಶ್ರೀವೈಷ್ಣವ ಮತದವರು ಆಳ್ವಾರರು ತಮಿಳಿನಲ್ಲಿ ರಚಿಸಿದ ಪ್ರಬಂಧಗಳನ್ನು ದೇವತಾರ್ಚನೆಯ ಸಮಯದಲ್ಲಿ ಪಠಿಸುತ್ತಿದ್ದುದನ್ನು ಕೇಳಿ ಮತ್ತು ಅಲ್ಲಿ ತಮಿಳು ಕೃತಿಗಳು ಜನಸಾಮಾನ್ಯರ ಮೇಲೆ ಬೀರಿದ್ದ ಪ್ರಭಾವ–ಪರಿಣಾಮಗಳನ್ನು ಶ್ರೀಪಾದರಾಜರು ಕಂಡು, ಕರ್ನಾಟಕದಲ್ಲಿಯೂ ಇದೇ ಪದ್ಧತಿ ತರಬೇಕೆಂದು ಆಶಿಸಿದರು. ತದನಂತರ ಅವರ ಸಂಚಾರದ ಕಾಲದಲ್ಲಿ ಕರ್ನಾಟಕದ ಕೋಲಾರ ಜಿಲ್ಲೆ ಮುಳಬಾಗಿಲಿಗೆ ಬಂದು ತಮ್ಮ ಮಠವನ್ನು ಸ್ಥಾಪಿಸಿದರು.

ಆಡು ಭಾಷೆ ಕನ್ನಡವಾಗಿದ್ದರೂ ಆಗಿನ ಕಾಲದಲ್ಲಿ ಪೂಜಾ ಸಮಯದಲ್ಲಿ ಕನ್ನಡದಲ್ಲಿ ಮಾತನಾಡಿದರೇ ಮೈಲಿಗೆಯಾಗುವುದೆಂಬ ಭಾವನೆಯಿತ್ತು. ಇಂತಹ ಪರಿಸ್ಥಿತಿಯಲ್ಲಿ ಪೂಜಾ ಸಮಯದಲ್ಲಿ ದೇವರನಾಮಗಳನ್ನು ಕನ್ನಡದಲ್ಲಿ ಹಾಡುವ ಪದ್ಧತಿಯನ್ನು ಶ್ರೀ ಶ್ರೀಪಾದರಾಜರು ಪ್ರಾರಂಭಿಸಿದ್ದು ನಿಜವಾಗಿಯೂ ಕ್ರಾಂತಿಕಾರಿ ಬದಲಾವಣೆಯಾಯಿತು. ಅಲ್ಲದೆ, ಎಲ್ಲ ಶಾಸ್ತ್ರ ವಿಷಯಗಳು, ಅವುಗಳ ಪಾಠವೂ ಸಂಸ್ಕೃತದಲ್ಲಿದ್ದುದರಿಂದ, ಸಾಮಾನ್ಯ ಜನರಿಗೆ ಅವುಗಳ ಪರಿಚಯ ಅಥವಾ ವಿಷಯ ತಿಳಿಯುವುದಕ್ಕೆ ಸಂಸ್ಕೃತ ಪಂಡಿತರನ್ನೇ ಅವಲಂಬಿಸಬೇಕಾದ ಅನಿವಾರ್ಯತೆ ಇತ್ತು. ಶ್ರೀ ಶ್ರೀಪಾದರಾಜರು ಸಾಮಾನ್ಯ ಜನರಿಗೆ ಅನುಕೂಲವಾಗುವಂತೆ ಕನ್ನಡದಲ್ಲಿ ಕೀರ್ತನೆಗಳನ್ನು **'ರಂಗವಿಠಲ'** ಎಂಬ ಅಂಕಿತದಲ್ಲಿ ರಚಿಸಿದರು. ಇವರು ರಚಿಸಿದ 80 ಕೀರ್ತನೆಗಳು, 17 ಉಗಾಭೋಗಗಳು, 3 ಸುಳಾದಿಗಳು, 1 ವೃತ್ತನಾಮ ಮತ್ತು 1 ದಂಡಕ ದೊರೆತಿವೆ. ಇವುಗಳಲ್ಲಿ ಭ್ರಮರಗೀತೆ, ವೇಣುಗೀತೆ, ಗೋಪೀಗೀತೆಯಂಥಹ ವಿಶೇಷ ಕೃತಿಗಳು ಮತ್ತು ಒಂದು ಅಪರೂಪದ ಕೀರ್ತನೆಯೂ ಸೇರಿವೆ. ಹೀಗೆ ಶ್ರೀ ಶ್ರೀಪಾದರಾಜರು ಕರ್ನಾಟಕ ಹರಿದಾಸ ಸಾಹಿತ್ಯಕ್ಕೆ ಪುಷ್ಟಿ ಕೊಟ್ಟು ಅದರ ಪ್ರವರ್ತಕರೆಂದು ಮಾನ್ಯರಾಗಿದ್ದಾರೆ. ಮುಂದಿನ ಹರಿದಾಸ ಪೀಳಿಗೆಗೆ ಮಾರ್ಗದರ್ಶಕರಾಗಿ ಭದ್ರವಾದ ಬುನಾದಿ ಹಾಕಿಕೊಟ್ಟಿದ್ದಾರೆ. ಅವರು ಕ್ರಿ.ಶ. 1504ರಲ್ಲಿ ಮುಳಬಾಗಿಲಿನಲ್ಲಿ ಬೃಂದಾವನಸ್ಥರಾದರು.

ಶ್ರೀ ಶ್ರೀಪಾದರಾಜರ ಕಾಲದಲ್ಲಿಯೇ ಶ್ರೀ ಮಧ್ವಾಚಾರ್ಯರ ಪರಂಪರೆಯಲ್ಲಿ ಬಂದ ದಿಗ್ಗಜ ಯತಿಗಳಾದ ಶ್ರೀ ವ್ಯಾಸರಾಜರು ಕ್ರಿ.ಶ. 1447ರಲ್ಲಿ ಮೈಸೂರು ಜಿಲ್ಲೆ ಟಿ.

ನರಸೀಪುರ ತಾಲ್ಲೂಕಿನ ಬನ್ನೂರಿನಲ್ಲಿ ಜನಿಸಿದರು. ಇವರ ಜನ್ಮನಾಮ ಯತಿರಾಜ. ಇವರು ಪ್ರಕಾಂಡ ಪಂಡಿತರು, ಜ್ಞಾನಿಗಳು ಮತ್ತು ತಮ್ಮ ವಿದ್ಯಾಗುರುಗಳಾದ ಶ್ರೀ ಶ್ರೀಪಾದರಾಜರಿಂದಲೇ ಪ್ರಶಂಸೆ ಪಡೆದವರು. ಶ್ರೀ ಶ್ರೀಪಾದರಾಜರು ಇವರನ್ನು **"**ಸಾಸಿರ ಜಿಹ್ವೆಗಳುಳ್ಳ ಶೇಷನೆ ಕೊಂಡಾಡಬೇಕು, ವ್ಯಾಸಮುನಿರಾಯರ ಸಂನ್ಯಾಸದಿರವ**"** ಮತ್ತು **"**ಇದಿರದಾವನು ನೀನಗೀ ಧರೆಯೊಳು, ಪದುಮನಾಭನ ದಾಸ ಪರಮೋಲ್ಲಾಸ, ವಾದಿ ತಿಮಿರ ಮಾರ್ತಾಂಡನೆಂದೆನಿಸಿದೆ, ವಾದಿ ಶರಭಬೇರುಂಡ, ವ್ಯಾಸರಾಯ**"** ಎಂದು ತಮ್ಮ ಕೀರ್ತನೆಗಳಲ್ಲಿ ಕೊಂಡಾಡಿದ್ದಾರೆ. ಶ್ರೀ ವ್ಯಾಸರಾಯರು ಶಾಸ್ತ್ರೀಯ ಸಂಗೀತದಲ್ಲಿಯೂ ಪಾರಂಗತರಾಗಿದ್ದರೆಂದು ಹೇಳಲಾಗಿದೆ. ಮಧ್ವ ದರ್ಶನ ಪ್ರತಿಪಾದನೆಯ ಮೂಲಕ ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಅವರ ಕೊಡುಗೆ ಅಪಾರವಾದದ್ದು. ಅವರು ಶಾಸ್ತ್ರೀಯ ಸಂಗೀತಕ್ಕೂ ಜನಸಾಮಾನ್ಯರ ಸಂಗೀತಕ್ಕೂ ಭದ್ರವಾದ ಸೇತುವೆಯಂತಿದ್ದರೆಂದು ಹೇಳಲಾಗಿದೆ. 18ನೇ ಶತಮಾನದ ತಂಜಾವೂರಿನ ದೊರೆ ಮಹಾರಾಜ ತುಳಜಾಜಿ ಮತ್ತು ಅನೇಕ ಪ್ರಸಿದ್ಧ ಸಂಗೀತ ಶಾಸ್ತ್ರಜ್ಞರು ಶ್ರೀ ವ್ಯಾಸರಾಜರನ್ನು **"**ಅಭಿನವ ಭರತಮುನಿ, ಸಂಗೀತಾಗಮ, ಸಂಗೀತ ದತ್ತಿಲ, ಸಂಗೀತ ವಿದ್ಯಾ ಸಂಪ್ರದಾಯ ಪ್ರವರ್ತಕರು, ವಿದ್ಯಾಸಿಂಹಾಸನಾಧ್ಯಕ್ಷರು, ಕಲ್ಪನಾ ಚತುರಾನನಾ**"** ಎಂದು ಹೊಗಳಿದ್ದಾರೆ.[16] (ದತ್ತಿಲ : ಕ್ರಿ.ಪೂ. 4ನೇ ಶತಮಾನ ಮತ್ತು ಕ್ರಿ.ಶ. 2ನೇ ಶತಮಾನದ ಮಧ್ಯ ಭಾಗದಲ್ಲಿದ್ದ ಭಾರತೀಯ ಸಂಗೀತ ಶಾಸ್ತ್ರಜ್ಞರಾದ ಒಬ್ಬ ಮುನಿಗಳು). **"**ಶಾಸ್ತ್ರೀಯ ಸಂಗೀತದಲ್ಲಿ ಪ್ರಾಚೀನ ಕಾಲದಿಂದಲೂ ಇರುವುದು ಶಾಸ್ತ್ರಭಾಗ ಮತ್ತು ಪ್ರಯೋಗ ಭಾಗಗಳು. theory and practice ಅನ್ನುವ ಹಾಗೆ. ಈ ಸಂಗೀತ ಸಂಪ್ರದಾಯವು ವಿಜಯನಗರದಲ್ಲಿ ಬೆಳೆದು, ಬಲಿತು, ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ಪ್ರೌಢವಾಗಲು ನೆರವಾದವರು ಶ್ರೀ ವ್ಯಾಸರಾಯಸ್ವಾಮಿಗಳು ಮತ್ತು ಪುರಂದರದಾಸರು. ಇದು ಕರ್ನಾಟಕ ಸಂಗೀತ ಸಂಪ್ರದಾಯ ಎಂದೆನಿಸಿಕೊಂಡಿತು**"**. [17]

ಶ್ರೀ ಶ್ರೀಪಾದರಾಜರು ಹಾಕಿಕೊಟ್ಟ ಹಾದಿಯಲ್ಲೇ ಸಾಗಿ, ಶ್ರೀ ವ್ಯಾಸರಾಜರು ಹರಿದಾಸ ಸಾಹಿತ್ಯಕ್ಕೆ ಇನ್ನಷ್ಟು ಪುಷ್ಟಿ ಕೊಟ್ಟರು. ಇವರು **'ಸಿರಿಕೃಷ್ಣ, ಶ್ರೀಕೃಷ್ಣ, ಉಡುಪಿಕೃಷ್ಣ, ಕೃಷ್ಣ'** ಎಂಬ ಅಂಕಿತಗಳಲ್ಲಿ ರಚಿಸಿರುವ 158 ಕೀರ್ತನೆಗಳು, 15 ಉಗಾಭೋಗಗಳು, 14 ಸುಳಾದಿಗಳು ಮತ್ತು 1 ವೃತ್ತನಾಮ ದೊರೆತಿವೆ. ಇವರ ಕಾಲದಿಂದ ಹರಿದಾಸ ಸಾಹಿತ್ಯದಲ್ಲಿ ಗುರು–ಶಿಷ್ಯ ಪರಂಪರೆ ವ್ಯವಸ್ಥಿತ ರೀತಿಯಲ್ಲಿ ಮುಂದುವರೆಯಿತು. ಮುಂದೆ ಸಂಸ್ಕೃತದ ಶಾಸ್ತ್ರ ಪಂಡಿತರನ್ನು ವ್ಯಾಸಕೂಟವೆಂದೂ, ಹರಿದಾಸರನ್ನು ದಾಸಕೂಟವೆಂದೂ ಗುರುತಿಸಲಾಯಿತು. ಶ್ರೀವ್ಯಾಸರಾಯರ ಶಿಷ್ಯರು ದಾಸಶ್ರೇಷ್ಠರಾದ ಪುರಂದರದಾಸರು ಮತ್ತು ಕನಕದಾಸರು, ಮತ್ತು ಸಮಕಾಲೀನರು ಶ್ರೀ ವಾದಿರಾಜತೀರ್ಥರು. ಶ್ರೀ ವ್ಯಾಸರಾಜತೀರ್ಥರು ಕ್ರಿ.ಶ. 1539ರಲ್ಲಿ ಹಂಪಿಯ ಬಳಿಯಿರುವ ನವವೃಂದಾವನದಲ್ಲಿ ಬೃಂದಾವನಸ್ಥರಾದರು.

ಶ್ರೀ ವಾದಿರಾಜತೀರ್ಥರು ಕ್ರಿ.ಶ. 1480ರಲ್ಲಿ ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕಿನ ಕುಂಭಾಸಿಯ ಬಳಿ ಹೂವಿನಕೆರೆಯಲ್ಲಿ ಜನಿಸಿದರು. ಇವರ ಜನ್ಮನಾಮ ವರಾಹ. ಶ್ರೀಮಧ್ವಾಚಾರ್ಯರು ಸ್ಥಾಪಿಸಿದ ಉಡುಪಿ ಅಷ್ಟಮಠಗಳಲ್ಲೊಂದಾದ ಕುಂಭಾಸಿ ಮಠವೆಂದು ಪ್ರಸಿದ್ಧವಾಗಿದ್ದ ಶ್ರೀ ವಿಷ್ಣುತೀರ್ಥರ ಮಠದ ಪೀಠಾಧಿಪತಿಗಳಾದರು. ಇವರ ಕಾಲದಿಂದ ಈ ಮಠವು ಸೋದೆ ವಾದಿರಾಜ ಮಠವೆಂದು ಪ್ರಸಿದ್ಧವಾಯಿತು. ಇವರು ಉತ್ತರ ಕನ್ನಡ ಜಿಲ್ಲೆ ಸಿರಸಿ ತಾಲ್ಲೂಕಿನ ಸೋಂದಾ ಕ್ಷೇತ್ರದಲ್ಲಿ ನೆಲೆಸಿ, ತಮ್ಮ ಆರಾಧ್ಯ ದೇವತೆಯಾದ ಹಯವದನರೂಪಿ ಶ್ರೀಹರಿಯ ಹೆಸರಿನಲ್ಲಿ ಸ್ವೀಕರಿಸಿದ **'ಹಯವದನ'** ಎಂಬ ಅಂಕಿತದಲ್ಲಿ ರಚಿಸಿದ 310 ಕೀರ್ತನೆಗಳು, 12 ಉಗಾಭೋಗಗಳು, 16 ಸುಳಾದಿಗಳು ಮತ್ತು 7 ದೀರ್ಘಕೃತಿಗಳು ದೊರೆತಿವೆ. ಇವರು ನೂರ ಇಪ್ಪತ್ತು ವರ್ಷಗಳ ಕಾಲ ಜೀವಿಸಿ ಕ್ರಿ.ಶ. 1600ರಲ್ಲಿ ಸೋಂದಾ ಕ್ಷೇತ್ರದಲ್ಲಿ ಸಜೀವವಾಗಿ ಬೃಂದಾವನಸ್ಥರಾದರು.

ಪುರಂದರದಾಸರ ಜನ್ಮನಾಮ ಶೀನಪ್ಪನಾಯಕ. ಇವರು ಕ್ರಿ.ಶ. 1480ರಲ್ಲಿ ಮಹಾರಾಷ್ಟ್ರದ ಪುಣೆಯಿಂದ ಹದಿನೆಂಟು ಮೈಲಿ ದೂರದಲ್ಲಿರುವ ಪುರಂದರಗಡದಲ್ಲಿ ಜನಿಸಿದವರು ಎಂದು ಹೇಳಲಾಗಿದೆ. ಆದರೆ ಇತ್ತೀಚಿನ ವರದಿಗಳ ಪ್ರಕಾರ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಅರಗ ಗ್ರಾಮ ಪಂಚಾಯತಿಯ ಕೇಶವಪುರದಲ್ಲಿ ಜನಿಸಿರಬಹುದೆಂದು ತಿಳಿದು ಬಂದಿದ್ದು, ಕರ್ನಾಟಕ ಸರ್ಕಾರ ಒಂದು ಸಮಿತಿಯನ್ನು ರಚಿಸಿ ಕೇಶವಪುರ ಮತ್ತು ಅದರ ಸುತ್ತಮುತ್ತಲಿರುವ ವರ್ತೇಪುರ, ವಿಠಲನಗುಂಡಿ ಮತ್ತು ದಾಸನಗಡ್ಡೆ ಎಂಬ ಸ್ಥಳಗಳಲ್ಲಿ ಸಂಶೋಧನೆ ನಡೆಸುತ್ತಿದೆ. ಪುರಂದರದಾಸರು ನವಕೋಟಿ ನಾರಾಯಣರೆನಿಸಿಕೊಂಡವರು. ಇವರು ದೇವಋಷಿ ನಾರದರ ಅವತಾರವೆಂದು ಹೇಳಲಾಗಿದೆ. ಅಪಾರ ಸಂಪತ್ತು ಮತ್ತು ಐಶ್ವರ್ಯಗಳನ್ನು ಬಿಟ್ಟು ಹರಿದಾಸರಾದರು; ಶ್ರೀ ವ್ಯಾಸರಾಯರಿಂದ "ಪುರಂದರವಿಠಲ" ಎಂಬ ಅಂಕಿತವನ್ನು ಪಡೆದು ತಮ್ಮ ಗುರುಗಳಿಂದಲೇ 'ದಾಸರೆಂದರೆ ಪುರಂದರದಾಸ'ರೆಂದು ಹೊಗಳಿಕೆಗೆ ಪಾತ್ರರಾದವರು. ಇವರು 4,25,000 ಕೃತಿಗಳನ್ನು ರಚಿಸಿದ್ದರೆಂದು ಹೇಳಲಾಗಿದೆ; ಆದರೆ ಈಗ ಲಭ್ಯವಿರುವುದು ಸುಮಾರು 1000 ಮಾತ್ರ. ಪುರಂದರದಾಸರು ಕ್ರಿ.ಶ. 1564ರಲ್ಲಿ ಹಂಪಿಯಲ್ಲಿ ಕಾಲವಾದರೆಂದು ಹೇಳಲಾಗಿದೆ.

ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಪುರಂದರದಾಸರ ಕೊಡುಗೆ ಅಪಾರವಾದದ್ದು. ಅವರು ಶಾಸ್ತ್ರೀಯ ಸಂಗೀತ ತಜ್ಞರಾಗಿದ್ದರೆಂದು ಹೇಳಲಾಗಿದೆ. ಕರ್ನಾಟಕ ಶಾಸ್ತ್ರೀಯ ಸಂಗೀತವು ಜನಪ್ರಿಯವಾಗಲು ಕಾರಣರಾದರೆಂದೂ, ಶಾಸ್ತ್ರೀಯ ಸಂಗೀತಕ್ಕೆ ಹೊಸದೊಂದು ದಾರಿಯನ್ನು ತೋರಿಕೊಟ್ಟರೆಂದೂ ಹೇಳಲಾಗಿದೆ. ಅವರ ಕಾಲದಲ್ಲಿ ನೂರಾರು ರಾಗಗಳಿದ್ದದ್ದು ನಿಜ, ಆದರೆ ಅದಕ್ಕೆ ಖಚಿತ ರೂಪರೇಷೆ ನೆಲೆಗೊಂಡಿರಲಿಲ್ಲ. ಶ್ರೀ ಪುರಂದರದಾಸರ ಕಾಲದಿಂದ ಆಧುನಿಕ ರಾಗ ಪದ್ಧತಿಗಳ ಯುಗಾರಂಭವಾಯಿತು ಎಂದು ಹೇಳಬಹುದು. "ಸಂಗೀತ ಪ್ರಪಂಚದಲ್ಲಿ ಗೊಂದಲದ

ಪರಿಸ್ಥಿತಿ ಇದ್ದು, ಅವರ ಪ್ರಭಾವದಿಂದ ಕರ್ನಾಟಕ ಶಾಸ್ತ್ರೀಯ ಸಂಗೀತದ ಇಂದಿನ ರಾಗ ಪದ್ಧತಿ ರೂಪ ತಳೆದದ್ದು ಎಂದು ಹೇಳಬಹುದು" ಎಂಬ ಅಭಿಪ್ರಾಯವಿದೆ.[18] ಈ ದೃಷ್ಟಿಯಿಂದ ಅವರನ್ನು ಕರ್ನಾಟಕ ಸಂಗೀತದ ಪಿತಾಮಹರಷ್ಟೇ ಅಲ್ಲ, ಕ್ರಾಂತಿ ಪುರುಷರೆಂದೂ ಕರೆಯಬಹುದು. ಅವರು ಸೃಷ್ಟಿಸಿದ ಬಾಲಪಾಠ ಕ್ರಮಗಳಾದ ಸರಳೆ, ಜಂಟೀವರಸೆಗಳು, ಗೀತೆಗಳು ಮುಂತಾದವು ಇಂದಿಗೂ ಪ್ರಪಂಚದ ಎಲ್ಲ ಭಾಗಗಳಲ್ಲಿಯೂ ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಪ್ರಾರಂಭಿಕ ಪಾಠಗಳಾಗಿ ಹೇಳಿಕೊಡಲಾಗುತ್ತಿವೆ. ಪುರಂದರದಾಸರ ಕಾಲದಲ್ಲಿ ಗ್ರಂಥಸ್ಥವಾಗಿ ನೂರಾರು ರಾಗಗಳಿದ್ದವು. ಪ್ರಾಚೀನವಾದ ಆ ರಾಗಗಳಲ್ಲಿ ಅವರು 32 ರಾಗಗಳನ್ನು ಭಕ್ತಿಯ ಭಾವವನ್ನು ಹೊರಸೂಸಲು ನೆರವಾಗುವುದೆಂದು ಗ್ರಹಿಸಿದರು. ಪ್ರಚಲಿತದಲ್ಲಿದ್ದ ಮತ್ತು ಪ್ರಸಿದ್ಧವಾದ ರಾಗಗಳಿಂದ ಈ 32 ರಾಗಗಳನ್ನು ಆಯ್ಕೆ ಮಾಡಿದರು ಎಂದೂ ಹೇಳಲಾಗಿದೆ. ಅವರ **"ನಳಿನಜಾಂಡ ತಲೆಯ ತೂಗಿ"**, **"ತುತ್ತೂರು ತೂರೆಂದು"** ಮತ್ತು "ಅಂಗನೆಯರೆಲ್ಲ ನೆರೆದು" ಎಂದು ಪ್ರಾರಂಭವಾಗುವ ಕೀರ್ತನೆಗಳಲ್ಲಿ ಆಹಿರಿ, ಕಲ್ಯಾಣಿ, ಕಾಂಬೋದಿ ಮುಂತಾದ ರಾಗಗಳನ್ನು ಹೆಸರಿಸಿದ್ದಾರೆ. ಈ 32 ರಾಗಗಳನ್ನೇ ಬತ್ತೀಸ–ದ್ವಾತ್ರಿಂಶತ್–ತ್ರಯದಶದ್ವಯ ರಾಗಗಳೆಂದು ಕರೆಯುವುದು.

ಕನಕದಾಸರು ಕ್ರಿ.ಶ. 1508ರಲ್ಲಿ ಕರ್ನಾಟಕದ ಹಾವೇರಿ ಜಿಲ್ಲೆಯ ಶಿಗ್ಗಾಂವ್ ತಾಲ್ಲೂಕಿನ ಬಾಡ ಗ್ರಾಮದ ಬಳಿಯ ಬಂಕಾಪುರದಲ್ಲಿ ಜನಿಸಿದರು. ಇವರ ಜನ್ಮನಾಮ ತಿಮ್ಮಪ್ಪ/ಕನಕನಾಯಕರು. ಶ್ರೀ ವ್ಯಾಸರಾಯರಿಂದ ಅಂಕಿತ ಪಡೆಯದಿದ್ದರೂ ಸಹಾ, ಅವರ ಬಳಿಯೇ ಹಲವಾರು ವರುಷಗಳು ಅವರ ಸೇವೆ ಮಾಡುತ್ತಾ **'ಆದಿಕೇಶವ'** ಎಂಬ ಅಂಕಿತದಲ್ಲಿ ರಚಿಸಿದ 50 ಮುಂಡಿಗೆಗಳು ಸೇರಿದಂತೆ 320 ಕೀರ್ತನೆಗಳು, 5 ಉಗಾಭೋಗಗಳು ಮತ್ತು 7 ದಂಡಕಗಳು ದೊರೆತಿವೆ. ಅಲ್ಲದೇ ಇವರು ಮೋಹನತರಂಗಿಣಿ, ನಳಚರಿತ್ರೆ, ರಾಮಧಾನ್ಯ ಚರಿತ್ರೆ ಮತ್ತು ಹರಿಭಕ್ತಿಸಾರ ಎಂಬ ಕಾವ್ಯಗಳನ್ನು ರಚಿಸಿದ್ದಾರೆ. ಕ್ರಿ.ಶ. 1606ರಲ್ಲಿ ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕಿನ ಕಾಗಿನೆಲೆಯಲ್ಲಿ ಕಾಲವಾದರು.

ಇವರುಗಳ ನಂತರ ಹರಿದಾಸ ಸಾಹಿತ್ಯದ ಬೆಳವಣಿಗೆ ಸ್ಥಗಿತಗೊಂಡ್ಡುದದರಿಂದ ಇಲ್ಲಿಯವರೆಗೆ ಮೊದಲನೆಯ ಘಟ್ಟವೆಂದು ಪರಿಗಣಿಸಲಾಗಿದೆ.



# 5. ಹರಿದಾಸ ಸಾಹಿತ್ಯದ ಎರಡನೆಯ ಘಟ್ಟ

ಕ್ರಿ.ಶ. 1596ರಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳು ಅವತರಿಸಿದರು. ಇವರು ಎರಡನೆಯ ಘಟ್ಟದ ಹರಿದಾಸರ ಪೀಳಿಗೆಗೆ ಸ್ಫೂರ್ತಿದಾಯಕರಾದರೆಂದು ಹೇಳಲಾಗಿದೆ. **'ಧೀರವೇಣುಗೋಪಾಲ'** ಎಂಬ ಅಂಕಿತದಲ್ಲಿ ಅವರು ರಚಿಸಿದ ಪ್ರಸಿದ್ಧವಾದ 'ಇಂದು ಎನಗೆ ಗೋವಿಂದ' ಎಂಬ ಒಂದು ಕೀರ್ತನೆ ದೊರೆತಿದೆ. ಕ್ರಿ.ಶ. 1671ರಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳು ಮಂತ್ರಾಲಯದಲ್ಲಿ ಸಜೀವವಾಗಿ ಬೃಂದಾವನಸ್ಥರಾದರು.

ಎರಡು ಘಟ್ಟಗಳ ಮಧ್ಯೆ ಕ್ರಿ.ಶ. 1640ರಲ್ಲಿ ಬಿಜಾಪುರ ತಾಲ್ಲೂಕಿನ ಕಾಖಂಡಕಿಯಲ್ಲಿ ಮಹಿಪತಿದಾಸರು ಜನಿಸಿದರು. 'ಅಜ್ಞಾತಕಾಲ' ಅಥವಾ 'ತಟಸ್ಥಕಾಲ'ವೆಂದು ಕರೆಸಿಕೊಂಡಿದ್ದ 17ನೆಯ ಶತಮಾನದಲ್ಲಿ ಇವರು ಹರಿದಾಸ ಸಾಹಿತ್ಯವನ್ನು ಮುಂದುವರೆಸಿದರು. 'ಮಹಿಪತಿ, ದೀನಮಹಿಪತಿ' ಇತ್ಯಾದಿ 14 ಮುದ್ರಿಕೆಗಳಲ್ಲಿ ಅವರು ರಚಿಸಿದ 702 ಕೀರ್ತನೆಗಳು, 6 ಉಗಾಭೋಗಗಳು ದೊರೆತಿವೆ. ಅಲ್ಲದೇ ಮರಾಠಿ, ಉರ್ದು ಮತ್ತು ಮಿಶ್ರ ಭಾಷೆಗಳಲ್ಲಿಯೂ ಕೀರ್ತನೆಗಳನ್ನು ರಚಿಸಿದ್ದಾರೆಂದು ತಿಳಿದಿದೆ. ಕ್ರಿ.ಶ. 1705 ರಲ್ಲಿ ಬಿಜಾಪುರ ಜಿಲ್ಲೆ ಬಸವನಬಾಗೇವಾಡಿ ತಾಲ್ಲೂಕಿನ ಕೊಲ್ಹಾರದಲ್ಲಿ ಕಾಲವಾದರು. ಇವರ ಪುತ್ರರು ಕಾಖಂಡಕಿ ಕೃಷ್ಣದಾಸರು ಕ್ರಿ.ಶ. 1673ರಲ್ಲಿ ಜನಿಸಿ, 'ಮಹಿಪತಿನಂದನ, ಮಹಿಪತಿಸುತ' ಇತ್ಯಾದಿ 21 ಮುದ್ರಿಕೆಗಳಲ್ಲಿ ರಚಿಸಿದ 710 ಕೀರ್ತನೆಗಳು, 38 ಉಗಾಭೋಗಗಳು, 1 ಸುಳಾದಿ, 1 ವೃತ್ತನಾಮ ದೊರೆತಿವೆ. ಇವರು ಕ್ರಿ.ಶ. 1729ರಲ್ಲಿ ಕಾಖಂಡಕಿಯಲ್ಲಿ ಕಾಲವಾದರು.

ಮೊದಲನೆಯ ಘಟ್ಟದ ಸುಮಾರು ಒಂದು ನೂರು ವರ್ಷಗಳ ನಂತರ ಕರ್ನಾಟಕ ಹರಿದಾಸ ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿ, ಎರಡನೇ ಘಟ್ಟಕ್ಕೆ ಒಯ್ದ ಮಹನೀಯರು ಶ್ರೀ ವಿಜಯದಾಸರು. ಕ್ರಿ.ಶ. 1682ರಲ್ಲಿ ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಚೀಕಲಪರವಿಯಲ್ಲಿ ಜನಿಸಿ, ನೆಲೆಸಿದ್ದು ಗುಂತಕಲ್ಲಿನಿಂದ ನಾಲ್ಕು ಮೈಲಿ ದೂರದಲ್ಲಿರುವ ಆಂಧ್ರಪ್ರದೇಶದ ಚಿಪ್ಪಗಿರಿಯಲ್ಲಿ. ಇವರ ಜನ್ಮನಾಮ ದಾಸಪ್ಪ. ಇವರು ಶ್ರೀ ಪುರಂದರದಾಸರ ಮಗನ ಪುನರ್ಜನ್ಮವೆಂದು ಹೇಳಲಾಗಿದೆ[19]. ಸ್ವಪ್ನದಲ್ಲಿ ಪುರಂದರದಾಸರಿಂದ ಅಂಕಿತ ಪಡೆದು **'ವಿಜಯವಿಠಲ'** ಎಂಬ ಅಂಕಿತದಲ್ಲಿ 75,000 ಕೃತಿಗಳನ್ನು ರಚಿಸಿದರೆಂಬ ಪ್ರತೀತಿ ಇದೆ. ಆದರೆ ಈಗ ಲಭ್ಯವಿರುವುದು 540 ಕೀರ್ತನೆಗಳು, 77 ಉಗಾಭೋಗಗಳು, 500 ಸುಳಾದಿಗಳು. ಇವರು ಸುಳಾದಿ ದಾಸರೆಂದೇ ಪ್ರಸಿದ್ಧರಾದವರು. ಕ್ರಿ.ಶ. 1755ರಲ್ಲಿ ಚಿಪ್ಪಗಿರಿಯಲ್ಲಿ ಕಾಲವಾದರು. ಇವರು ತಮ್ಮ ಜೀವಿತ ಅವಧಿಯಲ್ಲಿ ಪ್ರಾರಂಭಸಿದ ಹರಿದಾಸ ಸಾಹಿತ್ಯದ ಎರಡನೇ ಘಟ್ಟದ ಪರಂಪರೆ ನಿರಂತರವಾಗಿ ಸಾಗುತ್ತಾ, ಅನೇಕ ಹರಿದಾಸರು ಆಗಿ ಹೋಗಿದ್ದಾರೆ. ಇವರಲ್ಲಿ ಪ್ರಮುಖರಾದವರು ಶ್ರೀ ಪ್ರಸನ್ನವೆಂಕಟದಾಸರು.

ಶ್ರೀ ವಿಜಯದಾಸರ ಸಮಕಾಲೀನರಾದ ಶ್ರೀ ಪ್ರಸನ್ನವೆಂಕಟದಾಸರು ಕ್ರಿ.ಶ. ಸುಮಾರು 1680ರಲ್ಲಿ ಜನಿಸಿ, ಬಾಗಲಕೋಟೆ ಮತ್ತು ಕಾಖಂಡಕಿಯಲ್ಲಿ ನೆಲೆಸಿದರು. ಇವರ ಜನ್ಮನಾಮ ವೆಂಕಟೇಶ. ಸ್ವಪ್ನದಲ್ಲಿ ಅಂಕಿತ ಪಡೆದು ಇವರು ರಚಿಸಿದ **'**ಪ್ರಸನ್ನವೆಂಕಟ, ಪ್ರಸನ್ನವೇಂಕಟ, ಪ್ರಸನ್ನವೇಂಕಟೇಶ, ಪ್ರಸನ್ವೇಂಕಟ**'** ಎಂಬ ಅಂಕಿತದಲ್ಲಿ ರಚಿಸಿದ 428 ಕೀರ್ತನೆಗಳು, 20 ಉಗಾಭೋಗಗಳು, 9 ಸುಳಾದಿಗಳು, 1 ವೃತ್ತನಾಮ ಮತ್ತು 3 ಕೋಲುಹಾಡುಗಳು ದೊರೆತಿವೆ. ಇವರು ಕ್ರಿ.ಶ. 1752ರಲ್ಲಿ ಬಾದಾಮಿಯಲ್ಲಿ ಕಾಲವಾದರು.

**ಶ್ರೀ ಶ್ರೀಪಾದರಾಜರಿಂದ ಇಂದಿನವರೆವಿಗೂ ಗುರು–ಶಿಷ್ಯ ಪರಂಪರೆಯನ್ನು ಗುರುತಿಸಬಹುದು.**

ವಿಜಯದಾಸರಿಗೆ ಇಪ್ಪತ್ತೊಂದು ಜನ ಶಿಷ್ಯರಿದ್ದರೆಂದು ಹೇಳಲಾಗಿದ[19]. ಅವರಲ್ಲಿ ಪ್ರಮುಖರಾದವರು ಅವರ ಸಹೋದರ ಹಯವದನವಿಠಲರು, ಪಂಗನಾಮ ತಿಮ್ಮಣ್ಣದಾಸರೆಂದು ಪರಿಚಿತರಾದ ವೇಣುಗೋಪಾಲವಿಠಲರು, ಭಾಗಣ್ಣನವರೆಂದು ಪ್ರಸಿದ್ಧರಾದ ಗೋಪಾಲದಾಸರು ಮತ್ತು ವಿಜಯದಾಸರ ಸಾಕು ಮಗನಾದ ಮೋಹನದಾಸರು.

**ಇವರುಗಳ ಪರಂಪರೆಯಲ್ಲಿ ಬಂದ ಹರಿದಾಸರುಗಳ ಮತ್ತು ಇನ್ನೂ ಅನೇಕ ಹರಿದಾಸರುಗಳ ವಿವರಗಳನ್ನು ಅನುಬಂಧಗಳಲ್ಲಿ ತಿಳಿಸಲಾಗಿದೆ**



# 6. ಹರಿದಾಸರ ರಚನೆಗಳ ಪ್ರಕಾರಗಳು

ದೇವರನ್ನು ಮೆಚ್ಚಿಸುವ ಮತ್ತು ಆರಾಧಿಸುವ ಒಂಬತ್ತು ವಿಧದ ಭಕ್ತಿಗಳಲ್ಲಿ, ಕೀರ್ತನ ಭಕ್ತಿ ಎರಡನೆಯದು. ಅಂದರೆ ಭಗವಂತನ ಅನಂತ ಗುಣಗಳನ್ನು ಹೇಳುವುದು, ಕೀರ್ತಿಸುವುದು, ಸ್ತುತಿಸುವುದು ಕೀರ್ತನ ಭಕ್ತಿ. ಇಲ್ಲಿ ಕೀರ್ತನೆ ಎಂಬುದರ ಅರ್ಥದಲ್ಲಿ ಹರಿದಾಸರು ರಚಿಸಿರುವ ಎಲ್ಲ ಪ್ರಕಾರಗಳೂ ಸೇರುತ್ತವೆ.

**(1) ಕೀರ್ತನೆ (2) ಉಗಾಭೋಗ (3) ಸುಳಾದಿ (4) ವೃತ್ತನಾಮ (5) ದಂಡಕ (6) ತತ್ತ್ವಗ್ರಂಥ ಮತ್ತು (7) ವಿಶೇಷ ರಚನೆಗಳು.**

**(1) ಕೀರ್ತನೆ :** ಕನ್ನಡದ ಕೀರ್ತನೆಗಳ ಪ್ರಕಾರಗಳು ಸುಮಾರು ಎಂಟುನೂರು ವರ್ಷಗಳ ಹಳೆಯದೆಂದು ಹೇಳಲಾಗಿದೆ. ಹರಿದಾಸರ ರಚನೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವುದು ಮತ್ತು ಹೆಚ್ಚು ಪ್ರಚಲಿತದಲ್ಲಿರುವುದು ಕೀರ್ತನೆಗಳು. ಇವುಗಳನ್ನು ದೇವರನಾಮ ಅಥವಾ ದಾಸರ ಪದಗಳು ಎಂದೂ ಕರೆಯಲಾಗುತ್ತದೆ. ಗಾನದ ಮೂಲಕ ದೇವರನ್ನು ಕೀರ್ತಿಸುವುದು 'ಕೀರ್ತನೆ'. ಕೀರ್ತಿಸು ಎಂದರೆ ಹೊಗಳು, ಸ್ತುತಿಸು ಎಂಬ ಅರ್ಥವಿದೆ. ಕೀರ್ತನೆಗಳು ಹಾಡಲು ಮತ್ತು ನರ್ತಿಸಲು ಸೂಕ್ತವಾದ ಪ್ರಕಾರಗಳು; ಹಾಡಿಗೋಸ್ಕರವೇ ಬರೆದದ್ದು. ಕೀರ್ತನೆಯಲ್ಲಿ ಸಂಗೀತಕ್ಕಿಂತ ಸಾಹಿತ್ಯವೇ ಮುಖ್ಯ. ಒಂದು ಕಥೆಯನ್ನು ಕೀರ್ತನೆಯ ಮೂಲಕ ಹೇಳಿದರೆ ಅದು ಕಥಾ ಕೀರ್ತನೆಯಾಗುತ್ತದೆ. ಇದು ಹರಿಕಥೆಗಳ ಹುಟ್ಟಿಗೆ ಕಾರಣವಾಯಿತು. ಕೀರ್ತನೆಗಳು ರಾಗ–ತಾಳಗಳೆರಡೂ ಪ್ರಧಾನವಾಗಿರುವ ರಚನೆಗಳು; ರಾಗ–ತಾಳ ಬದ್ಧವಾಗಿರುತ್ತವೆ. ಓದುವವರು, ಕೇಳುವವರು ಮತ್ತು ಹಾಡುವವರು, ಎಲ್ಲರಿಗೂ ಆನಂದವನ್ನುಂಟು ಮಾಡುತ್ತವೆ. ಅಲ್ಪಸ್ವಲ್ಪ ಸಂಗೀತಜ್ಞಾನವುಳ್ಳವರೂ ಕೀರ್ತನೆಗಳನ್ನು ಹಾಡಬಹುದು. ಕರ್ನಾಟಕ ಶಾಸ್ತ್ರೀಯ ಸಂಗೀತದ ಕೃತಿಗಳಿಗೂ ಹರಿದಾಸರ ಕೀರ್ತನೆಗಳಿಗೂ ಇರುವ ವ್ಯತ್ಯಾಸವೆಂದರೆ, ಶಾಸ್ತ್ರೀಯ ಸಂಗೀತದ ಕೃತಿಗಳು ಸಂಪೂರ್ಣವಾಗಿ ಸಂಗೀತಬದ್ಧವಾದದ್ದು; ಅಲ್ಲಿ ಸಾಹಿತ್ಯಕ್ಕಿಂತ ಸಂಗೀತವೇ ಮುಖ್ಯ. ಹರಿದಾಸರ ಕೀರ್ತನೆಗಳಲ್ಲಿ ಸಾಹಿತ್ಯವೇ ಮುಖ್ಯ, ಆದರೆ ಸಂಗೀತ ಕೇವಲ ಒಂದು ಮಾಧ್ಯಮ.

**ಕೀರ್ತನೆಯ ಸ್ವರೂಪ** : ಕೀರ್ತನೆಯಲ್ಲಿ ಪಲ್ಲವಿ, ಅನುಪಲ್ಲವಿ, ನುಡಿ ಅಥವಾ ಚರಣ ಎನ್ನುವ ಮೂರು ಭಾಗಗಳಿರುತ್ತವೆ. ಕೆಲವು ಕೀರ್ತನೆಗಳಲ್ಲಿ ಅನುಪಲ್ಲವಿ ಇರುವುದಿಲ್ಲ.

**ಪಲ್ಲವಿ, ಅನುಪಲ್ಲವಿ** : ಸಾಮಾನ್ಯವಾಗಿ ರಚನಕಾರರು ತಾವು ಏನು ಹೇಳಬೇಕು ಎಂದಿರುತ್ತಾರೋ ಅದರ ಸಾರಾಂಶ, ಅಂದರೆ gist, ಪಲ್ಲವಿಯಲ್ಲಿ ಬಂದಿರುತ್ತದೆ.

ಪಲ್ಲವಿ ಕೀರ್ತನೆಯ ಮೂಲ, ಬುನಾದಿ, ತಳಪಾಯ ಅಥವಾ foundation ಎನ್ನಬಹುದು. ಪಲ್ಲವಿಯ ಭಾವ ಅಥವಾ ಅಭಿಪ್ರಾಯ ಏನಿರುತ್ತದೊ ಅದನ್ನು ಅನುಪಲ್ಲವಿ ಮುಂದುವರಿಸುತ್ತದೆ. ಅನುಪಲ್ಲವಿ ಕಡ್ಡಾಯವಲ್ಲ. ಅನೇಕ ಕೀರ್ತನೆಗಳಲ್ಲಿ ಈ ಭಾಗ ಇರುವುದಿಲ್ಲ. ಪ್ರತಿಯೊಂದು ಸಾಲಿನ ಎರಡನೆಯ ಅಕ್ಷರದಲ್ಲಿ ಪ್ರಾಸವಿರುತ್ತದೆ, ಅಂದರೆ rhyme ಆಗುತ್ತವೆ. ಉದಾಹರಣೆಗೆ, ಶ್ರೀ ವಾದಿರಾಜತೀರ್ಥರ ಕೀರ್ತನೆ : –

ಗಾಡಿಕಾರ ಶ್ರೀಕೃಷ್ಣ ರನ್ನ ಬಿಡದಿರೊ ಎನ್ನ ।ಪ।
ಬಡವರ ರಕ್ಷಿಪನ್ನ ಅಡಿಗೆರಗುವೆ ನಿನ್ನ ।ಅ.ಪ।

**ನುಡಿಗಳು** : ಪಲ್ಲವಿ ಅನುಪಲ್ಲವಿಗಳಂತೆ, ಸಾಮಾನ್ಯವಾಗಿ ಪ್ರತಿಯೊಂದು ನುಡಿಯಲ್ಲೂ ದ್ವಿತೀಯಾಕ್ಷರ ಪ್ರಾಸವು ನಿಯತವಾಗಿ ಬಂದಿರುತ್ತವೆ. ಅಲ್ಲಲ್ಲಿ ಒಳಪ್ರಾಸ, ಅಂತ್ಯಪ್ರಾಸಗಳೂ ಬರಬಹುದು. ಮೇಲಿನ ಕೀರ್ತನೆ ಮುಂದುವರೆಸಿ ನೋಡಿದಾಗ ಅದರಲ್ಲಿ ದ್ವಿತೀಯಾಕ್ಷರ ಪ್ರಾಸ, ಒಳಪ್ರಾಸ ಮತ್ತು ಅಂತ್ಯಪ್ರಾಸಗಳನ್ನು ಗಮನಿಸಬಹುದು. ಉದಾಹರಣೆಗಾಗಿ ಇಲ್ಲಿ ಮೊದಲ ನುಡಿಯಲ್ಲಿ ಮಾತ್ರ ಪ್ರಾಸವನ್ನು ಗುರುತು ಮಾಡಲಾಗಿದೆ. ಇದನ್ನು ಎಲ್ಲ ನುಡಿಗಳಲ್ಲಿಯೂ ಕಾಣಬಹುದು.

ಕಡಲಮಗಳ ಗಂಡ ಒಡಲೊಳು ತೋರ್ದಜಾಂಡ
ಪಿಡಿದ ದಂಡ ದೋರ್ದಂಡ ಬೇಡಿದಿಷ್ಟದಾನ ಶೌಂಡ ।1।

ಶರಧಿ ಮಧ್ಯದಿ ಪುರವರ ನಿರ್ಮಿಸಿದ ಧೀರ
ಈರೇಳು ಭುವನೋದ್ಧಾರ ನೀರದ ಶ್ಯಾಮಲಾಕಾರ ।2।

ಮಂದಸ್ಮಿತ ಮುಖದಿಂದ ಬಂದು ಉಡುಪಿಲಿ ನಿಂದ
ನಂದನಕಂದ ಮುಕುಂದ ವೃಂದಾರಕೇಂದ್ರ ಗೋವಿಂದ ।3।

ಭಾವಗೊಲಿದಜೋದ್ಭವ ಭವ ಸಂಜಾತರ ಕಾವ
ಭವಾಬ್ಧಿ ತಾರಕದೇವ ಭಾವಿಸುವರ ಸಂಜೀವ ।4।

ಮಧ್ವ ಮುನಿಪನೊಡೆಯ ಶುದ್ಧ ಯತಿಗಣ ಪ್ರಿಯ
ಶುದ್ಧವಾದಾಗಮಜ್ಞೇಯ ಮುದ್ದು **ಹಯವದನ**ರಾಯ ।5।

ಸಾಧಾರಣವಾಗಿ ಪಲ್ಲವಿಯಲ್ಲಿ ಹೇಳಲಾದ ವಿಚಾರವನ್ನು ನುಡಿಗಳು ವಿಸ್ತರಿಸಿ ಹೇಳುತ್ತವೆ. ಇದನ್ನು ಮೇಲಿನ ಕೀರ್ತನೆಯಲ್ಲಿ ಕಾಣಬಹುದು. ಇದಕ್ಕೆ ಮತ್ತೊಂದು

ಉದಾಹರಣೆ ಎಂದರೆ ಶ್ರೀ ಪುರಂದರದಾಸರ ಕೀರ್ತನೆ :

ದಾಸನ ಮಾಡಿಕೊ ಎನ್ನ ಸ್ವಾಮಿ
ಸಾಸಿರನಾಮದ ವೇಂಕಟರಮಣ । ಪ ।

ದುರುಬುದ್ಧಿಗಳನೆಲ್ಲ ಬಿಡಿಸೊ ನಿನ್ನ
ಕರುಣಕವಚವೆನ್ನ ಹರಣಕ್ಕೆ ತೊಡಿಸೊ
ಚರಣಸೇವೆ ಎನಗೆ ಕೊಡಿಸೊ ಅಭಯ
ಕರಪುಷ್ಪವನೆನ್ನ ಶಿರದಲಿ ಮುಡಿಸೊ । 1 ।

ದೃಢಭಕ್ತಿ ನಿನ್ನಲಿ ಬೇಡಿ ನಾ –
ನಡಿಗೆರಗುವೆನಯ್ಯ ಅನುದಿನ ಪಾಡಿ
ಕಡೆಗಣ್ಣಿಲೇಕೆನ್ನ ನೋಡಿ ಬಿಡುವೆ
ಕೊಡು ನಿನ್ನ ಧ್ಯಾನವ ಮನ ಶುಚಿ ಮಾಡಿ । 2 ।

ಮರೆ ಹೊಕ್ಕವರ ಕಾಯ್ವ ಬಿರುದು ಎನ್ನ
ಮರೆಯದೆ ರಕ್ಷಣೆ ಮಾಡಯ್ಯ ಪೊರೆದು
ದುರಿತಗಳೆಲ್ಲವ ತರಿದು ಸಿರಿ
**ಪುರಂದರವಿಠಲ** ಎನ್ನನು ಪೊರೆದು । 3 ।

ನನ್ನನ್ನು ದಾಸನಾಗಿ ಮಾಡಿಕೊ ಎಂದು ಪಲ್ಲವಿಯಲ್ಲಿ ದೇವರನ್ನು ದಾಸರು ಪ್ರಾರ್ಥಿಸುತ್ತಾರೆ. ದಾಸನಾಗುವುದಕ್ಕಾಗಿ ಸಾಧನೆ ಮಾಡಲು ತಮಗೆ ಏನೇನು ಬೇಕೆಂಬುದನ್ನು ವಿವರವಾಗಿ ನುಡಿಗಳಲ್ಲಿ ದೇವರನ್ನು ಕೇಳಿಕೊಳ್ಳುತ್ತಾರೆ.

ನುಡಿಗಳು ಹೆಚ್ಚಾಗಿ ನಾಲ್ಕು ಸಾಲಿನವು ಆಗಿರುತ್ತವೆ. ಒಂದು ನುಡಿಯಲ್ಲಿ ಎರಡು ಸಾಲುಗಳಿಂದ ಹಿಡಿದು 13 ಸಾಲುಗಳು ಬಂದಿರುವ ಕೀರ್ತನೆಗಳೂ ಉಂಟು. ಎಲ್ಲ ನುಡಿಗಳಲ್ಲೂ ಸಾಲುಗಳ ಸಂಖ್ಯೆ ಏಕ ರೀತಿಯಾಗಿ ಇರುತ್ತದೆ. ಅಂದರೆ ಒಂದು ನುಡಿಯಲ್ಲಿ 4 ಸಾಲುಗಳಿದ್ದರೆ ಎಲ್ಲ ನುಡಿಗಳಲ್ಲೂ 4 ಸಾಲುಗಳು ಇರುತ್ತವೆ. ಸಾಮಾನ್ಯವಾಗಿ ನುಡಿಗಳು ಬೆಸ ಸಂಖ್ಯೆಯಲ್ಲಿರುತ್ತವೆ; ಕನಿಷ್ಠ 3 ನುಡಿಗಳಿರಬೇಕು, ಗರಿಷ್ಟಕ್ಕೆ ಮಿತಿಯಿಲ್ಲ. ಪ್ರತಿಯೊಂದು ಕೀರ್ತನೆಯ ಕೊನೆಯ ನುಡಿಯಲ್ಲಿ ಆಯಾ ರಚನಕಾರರ ಅಂಕಿತವಿರುತ್ತದೆ.

ಪ್ರಾಸದಲ್ಲಿ **'ಣ–ನ'**, **'ಶ–ಷ–ಸ'** ಗಳು ಒಂದೇ ಆಗಿ ಪರಿಗಣಿಸಲ್ಪಡುತ್ತವೆ. ಉದಾಹರಣೆಗೆ ಶ್ರೀ ಪುರಂದರದಾಸರ ಒಂದು ಕೀರ್ತನೆ : –

ಶ್ರೀನಿವಾಸನು ಬಂದ ಕೋನೇರಿ ತಿಮ್ಮಪ್ಪ
ವಾಣಿಯರಸನಯ್ಯನು ।ಪ।

ವೇಣುಗಾನಲೋಲ ಮೋಸ ಮಾಡಲು ಬಂದ
ದೀನ ರಕ್ಷಕನಯ್ಯ ಮೋಹನಕೃಷ್ಣ ।ಅ.ಪ।

ಪತಿತಪಾವನ ಬಂದ ಸಚ್ಚಿದಾನಂದನು
ಹಿತಕರನು ಬಂದ ನಿಖಿಳ ವೇದ
ಪ್ರತಿಪಾದ್ಯನು ಬಂದ ಹಿಗ್ಗುತಲಿ ನಿಂದ
ಮತಿಗೆಡಿಸಿ ಪೋದನಯ್ಯ ಮುದ್ದು ರಂಗಯ್ಯ ಕೃಷ್ಣ ।1।

ಉಡುಪಿನಿಲಯ ಬಂದ ಉಡುಪನಂತ್ಹೊಳೆಯುತ
ತಟಿಯಂತೆ ಮರೆಯಾದ ಕಾಣಬಾರದ ವಸ್ತು
ಉಟ್ಟದ್ದು ತೊಟ್ಟದ್ದು ಇಟ್ಟದ್ದು ನೋಡಲು
ಅಷ್ಟು ಮಾಯವಯ್ಯ ಬಲು ಮಾಯವಯ್ಯ ।2।

ಏಸು ಹರುಷವೊ ಏಸು ಕರುಣವೊ
ಕಾಸು ಬಾಳದ ಎನ್ನ ಮೇಲೆ ಮುದ್ದು ಕೃಷ್ಣನಿಗೆ
ವಾಸುಕಿಶಯನನು ತಂದೆ **ಪುರಂದರವಿಠಲ**
ಶೇಷಾದ್ರಿವಾಸನಯ್ಯ ಕೇಳಣ್ಣಯ್ಯ ।3।

**ಕೀರ್ತನೆಗಳಲ್ಲಿ ಬರುವ ವಿವಿಧ ಬಗೆಯ ವಿಷಯಗಳಿಗೆ ಅನುಗುಣವಾಗಿ ಮುಂಡಿಗೆ, ಆತ್ಮನಿವೇದನೆ, ನಿಂದಾಸ್ತುತಿ, ಲೋಕನೀತಿ–ನೀತಿಬೋಧೆ, ಭ್ರಮರಗೀತೆ, ವೇಣುಗೀತೆ, ಗೋಪೀಗೀತೆ ಎಂದು ವಿಭಾಗಿಸಬಹುದು.**

**(1)(i) ಮುಂಡಿಗೆಗಳು:** ಇವು ಒಗಟಿನಂತಹ ಕೀರ್ತನೆಗಳು. ಅನ್ಯಾರ್ಥಪ್ರಧಾನ ರಚನೆಗಳು, ಹೇಳುವುದನ್ನು ನೇರವಾಗಿ ಹೇಳುವುದಿಲ್ಲ. ಇವುಗಳ ಅರ್ಥ ತಿಳಿದುಕೊಳ್ಳುವುದು ಬಹಳ ಕಠಿಣವಾದುದರಿಂದ ಪಂಡಿತರ ಸಹಾಯ ಬೇಕಾಗುವುದು. ಮುಂಡಿಗೆಗೆ ಒಂದು ಉದಾಹರಣೆ ಶ್ರೀ ಪುರಂದರದಾಸರ 'ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ, ಎರಡು ಬರಿದು ಒಂದು ತುಂಬಲಿಲ್ಲ' ಎನ್ನುವ ಕೀರ್ತನೆ. ಶ್ರೀ ಪುರಂದರದಾಸರ 'ಏನಾದರೂ ಒಂದಾಗಲಿ' ಎಂಬ ಕೀರ್ತನೆಯಲ್ಲಿ, 'ಅತ್ತೆಯ ಕಣ್ಣು ಹೋಗಲಿ, ಮಾವನ ಕಾಲು ಮುರಿಯಲಿ, ಮನೆಯ ಗಂಡ ಮಾಯವಾಗಲಿ,

ಅತ್ತಿಗೆ ನಾದಿನಿ ಸಾಯಲಿ', ಎಂದೆಲ್ಲ ಹೇಳುತ್ತಾರೆ. ಹರಿದಾಸರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮುಂಡಿಗೆಗಳನ್ನು ರಚಿಸಿದವರು ಕನಕದಾಸರು. ಶ್ರೀ ಕನಕದಾಸರ ಒಂದು ಮುಂಡಿಗೆ ಹೀಗಿದೆ:

ಏನೆ ಮನವಿತ್ತೆ ಲಲಿತಾಂಗಿ ಅಸ –
ಮಾನ ಗೋವಳ ಕುಲವಿಲ್ಲದವನೊಳು ।ಪ।

ಮಗಗೆ ಮೈದುನನಾದ ಮಗಳಿಗೆ ಪತಿಯಾದ
ಮಗಳಿಗಳಿಯನಾದ ಅಳಿಯಗಳಿಯನಾದ ।1।

ಮಗಳ ಮಗಗೆ ಮೈದುನನಾಗಿ ಮಾವನ
ಜಗವರಿಯಲು ಕೊಂದ ಕುಲಗೇಡಿ ಗೋವಳ ।2।

ಅತ್ತೆಗೆ ವಲ್ಲಭನಾದ ಭೃತ್ಯರಿಗಾಳಾದ
ಚಿತ್ತ ಒಲಿದು ಚೆನ್ನ **ಆದಿಕೇಶವ**ನೊಳು ।3।

ಈ ಕೀರ್ತನೆ ನೇರವಾಗಿ ಅರ್ಥವಾಗದ ಸಂಬಂಧಗಳನ್ನು ತಿಳಿಸಿ ಮೇಲ್ನೋಟಕ್ಕೆ ಭಗವಂತನನ್ನು ಅಪಹಾಸ್ಯ ಮಾಡುವಂತೆ ಕಂಡರೂ ಭಗವಂತನ ಮಹಿಮೆಯನ್ನು ತಿಳಿಸುತ್ತದೆ. ಇದು ಶ್ರೀ ಲಕ್ಷ್ಮೀದೇವಿಯರನ್ನು ಉದ್ದೇಶಿಸಿರುವ ಕೀರ್ತನೆ. ಲಲಿತಾಂಗಿಯಾದ ನೀನು ಯಾವ ಗುಣವನ್ನು ಮೆಚ್ಚಿ ನಾರಾಯಣನನ್ನು ವರಿಸಿದೆ ? ಧನಾದಿಗಳಿಲ್ಲದೆ ಕೇವಲ ಗೋಪಾಲಕನಾದವನು, ಕುಲವೂ ತಿಳಿಯದು.

ತನ್ನ ಮಗನೆನಿಸಿದ ಇಂದ್ರದೇವರ ಅವತಾರಿಯಾದ ಅರ್ಜುನನಿಗೆ ತನ್ನ ತಂಗಿಯಾದ ಸುಭದ್ರೆಯನ್ನು ಕೊಟ್ಟು ವಿವಾಹ ಮಾಡಿಕೊಟ್ಟು ಮಗನಿಗೆ ಭಾವಮೈದುನನೆನಿಸಿದನು. ಸಮುದ್ರದಲ್ಲಿ ಮುಳುಗಿದ ಭೂಮಿಯನ್ನು ಉದ್ಧರಿಸಿದ್ದರಿಂದ ಭೂಮಿಯು ಮಗಳಾದಳು. ಭಗವಂತನು ಅವಳನ್ನೇ ವರಾಹರೂಪದಿಂದ ಎಡ ತೊಡೆಯ ಮೇಲೆ ಪತ್ನಿಯಂತೆ ಧರಿಸಿ ಭೂವರಾಹನಾದನು. ಇದನ್ನೇ ಮಗಳಿಗೆ ಪತಿಯಾದ ಎಂದಿದ್ದಾರೆ. ಹಾಗೆಯೇ ಭೂಮಿಯ ಮಗಳಾದ ಸೀತೆಯನ್ನು ಶ್ರೀ ರಾಮ ವಿವಾಹವಾಗಿ ಮಗಳಿಗೆ ಅಳಿಯನೆನಿಸಿದನು.

ಭಗವಂತನ ಪಾದದಿಂದ ಸೃಷ್ಟಿಯಾದ ಗಂಗೆಯು ಭಗವಂತನ ಪುತ್ರಿಯೆನಿಸಿರುವಳು. ಅವಳನ್ನು ವರುಣನಿಗೆ ಮದುವೆ ಮಾಡಿಕೊಟ್ಟದ್ದರಿಂದ ವರುಣನು ಭಗವಂತನಿಗೆ ಅಳಿಯನಾಗಿರುವನು. ಅಳಿಯನಾದ ಸಮುದ್ರರಾಜ ವರುಣನು ಪುತ್ರಿಯೆನಿಸಿದ ಶ್ರೀಲಕ್ಷ್ಮೀದೇವಿಯನ್ನು ಭಗವಂತನಿಗೆ ಮದುವೆ ಮಾಡಿಕೊಟ್ಟದ್ದರಿಂದ ಭಗವಂತನು

ವರುಣನಿಗೆ ಅಳಿಯನಾದನು. ಹೀಗೆ ಅಳಿಯನಾದ ವರುಣನಿಗೆ ಭಗವಂತ ಅಳಿಯನೆನಿಸಿರುವವನು.

ಭಗವಂತನ ಮಗಳಾದ ಭೂಮಿಯ ಮಗನಾದ ನರಕಾಸುರನಂತೆ ಭೂಮಿಯಿಂದ ಹುಟ್ಟಿದ ಸೀತೆಯನ್ನು ವರಿಸಿ ಶ್ರೀರಾಮನು ನರಕಾಸುರನಿಗೆ ಭಾವಮೈದುನನಾಗಿರುವನು. ನರಕಾಸುರನು ಬಂಧಿಸಿ ತಂದೆಯಂತೆ ಸಾಕಿದ್ದ ಹದಿನಾರು ಸಾವಿರ ಸ್ತ್ರೀಯರನ್ನು ಶ್ರೀ ಕೃಷ್ಣನು ವಿವಾಹವಾದ್ದರಿಂದ ನರಕಾಸುರನು ಮಾವನೆನಿಸಿದನು. ಇವನನ್ನು ಕೊಂದದ್ದರಿಂದ ಮಾವನನ್ನೇ ಕೊಂದವನಾದನು.

ಅತ್ತೆಯಾದ ಭೂಮಿಗೆ ವರಾಹರೂಪದಿಂದ ವಲ್ಲಭನಾದನು. ಭೃತ್ಯರಾದ ಪಾಂಡವರಿಗೆ ಆಳಿನಂತೆ ಸಂಧಿಗೆ ಸೂತಕಾರ್ಯವನ್ನು ಕೈಗೊಂಡವನು. ಇಂತಹವನಿಗೆ ಮನವಿತ್ತೆ ಏನೆ ? [20]

**(1)(ii) ಆತ್ಮನಿವೇದನೆ :** ಒಬ್ಬ ಸಾಮಾನ್ಯ ವ್ಯಕ್ತಿಯ ವೈಯಕ್ತಿಕ ಜೀವನದ ಅನುಭವ, ಸುಖ, ಅಳಲು, ಅಂದರೆ ದುಃಖ, ಶೋಕ, ವ್ಯಥೆ, ತಪ್ಪೊಪ್ಪಿಗೆ – ಇವುಗಳ ಬಗ್ಗೆ ಪ್ರಾರ್ಥನೆ ಮಾಡುವುದು ಆತ್ಮನಿವೇದನೆ. ಹರಿದಾಸರು ತಮ್ಮನ್ನು ಆ ವ್ಯಕ್ತಿಯ ಸ್ಥಾನದಲ್ಲಿರಿಸಿಕೊಂಡು ಈ ರೀತಿಯ ಕೀರ್ತನೆಗಳನ್ನು ರಚನೆ ಮಾಡಿದ್ದಾರೆ. ಉದಾಹರಣೆಗೆ ಶ್ರೀ ಶ್ರೀಪಾದರಾಜರ ಒಂದು ರಚನೆ :

ನಾನೇ ಸಜ್ಜನನಾದಡೆ ಇಂಥ
ಹೀನ ವಿಷಯಗಳಿಗೆರಗುವೆನೇನಯ್ಯ ।ಪ।

ನಿರುತದಿ ಪರರ ನಿಂದಿಸುತಿಹೆನೆ
ಗುರುಹಿರಿಯರು ಸಜ್ಜನರೆನ್ನದೆ
ಹರಿ ಪರದೈವವೆಂದರಿತು ಭಜಿಸದೆ
ಪರರ ಒಡವೆಗಳ ಬಯಸುವೆನೇನಯ್ಯ ।1।

ಚಿತ್ತವ ಪುರುಷೋತ್ತಮನಲ್ಲಿಡದೆ
ಉತ್ತಮರಾದವರೊಡನಾಡದೆ
ತತ್ವ ವಿಚಾರವ ಮಾಡದೆ ನಾನು –
ನ್ಮತ್ತರ ಸಂಗವ ಮಾಡುವೆನೇನಯ್ಯ ।2।

ಹೇಯ ಶರೀರವ ಪೋಷಿಸಿಕೊಂಡು ಉ –
ಪಾಯವ ಚಿಂತಿಸಿ ಬಳಲುವೆನು
ರಾಯರ ಮಾಡಿ ಶರಣರ ಸಲಹುವ
**ರಂಗವಿಠಲ**ನ ಬಿಡುವೆನೇನಯ್ಯ । 3 ।

**(1)(iii) ನಿಂದಾಸ್ತುತಿ :** ಇವುಗಳಲ್ಲಿ ದೇವರನ್ನು ಪ್ರೀತಿಯಿಂದ, ಸ್ನೇಹಭಾವದಿಂದ ಛೇಡಿಸುವುದು, tease ಮಾಡುವುದನ್ನು ಕಾಣಬಹುದು. ಉದಾಹರಣೆಗೆ ಶ್ರೀ ಪುರಂದರದಾಸರ ಪ್ರಸಿದ್ಧವಾದ ಒಂದು ಕೀರ್ತನೆ, 'ನೀನ್ಯಾಕೋ ನಿನ್ನ ಹಂಗ್ಯಾಕೊ, ನಿನ್ನ ನಾಮದ ಬಲವೊಂದಿದ್ದರೆ ಸಾಕೋ'. ನೀನೂ ಬೇಡ, ನಿನ್ನ ಹಂಗೂ ಬೇಡ, ನಿನ್ನ ನಾಮದ ಸ್ಮರಣೆ ಒಂದೇ ನನಗೆ ಸಾಕು ಎನ್ನುತ್ತಾರೆ ದಾಸರು. ಹಾಗೆಯೇ 'ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ, ನಿನ್ನಂಥ ತಂದೆಯು ಎನಗುಂಟು ನಿನಗಿಲ್ಲ' ಎಂದು ಹೇಳುವುದೂ ಸಹ ನಿಂದಾಸ್ತುತಿ.

'ಹ್ಯಾಂಗೆ ಕೊಟ್ಟನು ಹೆಣ್ಣ ಸಾಗರನು ಈ ವರಗೆ, ಶೃಂಗಾರ ಪುರುಷರು ಬಹು ಮಂದಿ ಇರಲು' ಎನ್ನುವ ಕೀರ್ತನೆಯಲ್ಲಿ, ಶ್ರೀಹರಿಯ ದಶಾವತಾರಗಳ ರೂಪವನ್ನು ವರ್ಣಿಸುತ್ತಾ,

ಗುಷ್ಟು ನಾರುವ ಮೈಯ್ಯಿ ಬಿಟ್ಟಿದ್ದ ಬಿರುಗಣ್ಣು (ಮತ್ಸ್ಯಾವತಾರ)
ಮುಟ್ಟಿ ನೋಡಿದರೆ ಮೈ ಅತಿ ಕಠಿಣವು (ಕೂರ್ಮಾವತಾರ)
ಸೊಟ್ಟ ಮೋರೆಯು ಇವಗೆ ಎಷ್ಟುದ್ದ ಹಲ್ಲುಗಳು (ವರಾಹಾವತಾರ)
ಇಷ್ಟು ಘೋರ ಮುಖದಳಿಯನೆಲ್ಲಿ ದೊರಕಿದನೊ

ಇಂಥಹವನಿಗೆ ಸಮುದ್ರ ರಾಜ ತನ್ನ ಮಗಳಾದ ಲಕ್ಷ್ಮಿಯನ್ನು ಹೇಗೆ ಮದುವೆ ಮಾಡಿಕೊಟ್ಟ, ಎಲ್ಲಿ ಸಿಕ್ಕಿದ ಇವನು, ಎಂದು ಶ್ರೀ ವಾದಿರಾಜರು ಕೇಳುತ್ತಾರೆ.

**(1)(iv) ಲೋಕನೀತಿ–ನೀತಿಬೋಧೆ** : ಉದಾಹರಣೆಗೆ, ಶ್ರೀ ಪುರಂದರದಾಸರ 'ಬುದ್ಧಿಮಾತು ಹೇಳಿದರೆ ಕೇಳಬೇಕಮ್ಮ ಮಗಳೆ, ಮನ ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ' ಎನ್ನುವ ಕೀರ್ತನೆ ಮತ್ತು ಶ್ರೀ ಶ್ರೀಪಾದರಾಜರ ಈ ಮುಂದಿನ ಕೀರ್ತನೆ:

ಏನು ಭ್ರಮೆ ಮನುಜರಿಗೆ ಎಷ್ಟು ಮಮತೆ ಪ್ರಕೃತಿಯಲಿ
ಮೀನು ಗಾಣವ ನುಂಗಿ ಮೋಸಹೋದ ತೆರನಂತೆ । ಪ ।

ನನ್ನ ಮನೆ ನನ್ನ ಸತಿ ನನ್ನ ಸುತರೆಂದೆನಿಸಿ
ಹೊನ್ನುಗಳ ಗಳಿಸಿ ಹೆಚ್ಚಾಗಿ ಹೋಯ್ದಾಡಿ
ಸಣ್ಣವರ ಮದುವೆ ಸಂಭ್ರಮದಿ ಮಾಡುವೆನೆಂದು
ಅನ್ನ ಮೊದಲು ಕಾಣದೆ ಅಂತರ ಪಿಶಾಚಿಯಂತೆ ।1।

ಬಲುವೋದಿಕೆಯಲ್ಲಿ ಬಲ್ಲವರೆನಿಸಬೇಕೆನುತ
ಹಲವು ಬುದ್ಧಿಯಲ್ಲಿ ಹಿರ್ರನೆ ಹಿಗ್ಗುತ
ಮಲಿನ ಮನಸಿನಜ್ಞಾನದಲಿ ತಾನರಿಯದೆ
ಬಲೆಯಲ್ಲಿ ಸಿಲುಕಿದ ಪಕ್ಷಿಯಂತೆ ಬಳಲುತಿಹ ।2।

ಮಿಗಿಲು ಆಸೆಗೆ ಬಿದ್ದು ಬಗೆ ಬಗೆ ಹೂಣಿಕೆಯಲಿ
ಹೊಗದಲ್ಲಿ ಹೊಗುವರು ಹೊಲ ಬಿಟ್ಟು ತಿಳಿಯರು
ಖಗವಾಹನ ಮುದ್ದು **ರಂಗವಿಠಲ**ನ ನಾಮ ಸ್ಮರಿಸಲು
ವಿಗಡ ಸಂಸಾರ ಹಗರಣ ನೀರಗುಳ್ಳೆಯಂತೆ ।3।

**ಕೀರ್ತನೆಗಳಲ್ಲಿ ಭ್ರಮರಗೀತೆ, ವೇಣುಗೀತೆ, ಗೋಪಿಗೀತೆಗಳೂ** ಸೇರಿವೆ. ಇವುಗಳಲ್ಲಿ ಕೃಷ್ಣ ಮತ್ತು ಗೋಪಿಯರ ದೈವಿಕ ಪ್ರೇಮ, ಮಧುರ ಬಾಂಧವ್ಯಗಳು ಓದುಗರ ಅನುಭವಕ್ಕೆ ಬರುತ್ತವೆ. ಕೃಷ್ಣನ ಮೋಹಕ ಮುರಳೀಗಾನದ ಚಿತ್ರಣ, ಕೃಷ್ಣ ಬೃಂದಾವನದಿಂದ ಮಧುರೆಗೆ ಹೊರಟಾಗ ಮತ್ತು ಹೊರಟಮೇಲೆ ಗೋಪಿಯರು ತೋಡಿಕೊಳ್ಳುವ ವಿರಹ ವೇದನೆಯನ್ನು ಮತ್ತು ಈ ಪ್ರಸಂಗಗಳನ್ನು ವರ್ಣಿಸುವ ಕೀರ್ತನೆಗಳು. ಉದಾಹರಣೆಗೆ, ಶ್ರೀ ಶ್ರೀಪಾದರಾಜರ ಒಂದು ಭ್ರಮರಗೀತೆಯ ಕೆಲವು ಸಾಲುಗಳನ್ನು ಇಲ್ಲಿ ಕೊಡಲಾಗಿದೆ:

ಭೃಂಗಾ ನಿನ್ನಟ್ಟಿದನೇ ಶ್ರೀರಂಗ ಮಧುರೆಲಿ ನಿಂದು
ಅಂಗಜಲುಬ್ಧಕ ಪೂಗೋಲಂಗಳ ತಡೆಯನಿಕ್ಕಿ
ಅಂಗನೇರೆಂಬೋ ಹುಲ್ಲೆ ಮೃಗಂಗಳಿಗೆ ಗುರಿಯೆಚ್ಚು
ಹಿಂಗಿಸುತೈಧಾನೆ ಅಸುವ ಹೇ ಕಿತವಾ ।ಪ।

ನಿನ್ನ ನೋಡೆ ನಮ್ಮ ಅಚ್ಯುತನ್ನ ಕಂಡಂತಾಯಿತಯ್ಯ
ಚನ್ನಿಗರರಸ ಕುಶಲೋನ್ನತಿಯೊಳಹನೇನೋ
ಚಿಣ್ಣತನ ಮೊದಲಾಗವನ್ನ ಕಿತವ ಬಲ್ಲೆವೋ
ಗನ್ನಗಾರ ಚಿತ್ತ ಚೋರನ್ನ ಶ್ರೀ ಹರಿಯಾ
ಮನ್ನಣೆಗೆ ಮೆಚ್ಚಿ ತನುವನ್ನೊಪ್ಪಿಸಿದ ಮುಗುದೆ–

ವೆಣ್ಣುಗಳ ವಿರಹಾಬ್ಧಿಯನ್ನೆ ದಾಟಿಸುವೆನೆಂದು
ತನ್ನ ನೇಹವೆಂಬೋ ನಾವೆಯನ್ನೇರಿಸಿ ಮೋಸದಿ
ನಡುನೀರೊಳು ತೊರೆದ್ಹೋದನೆ ಹೇ ಕಿತವಾ ।1।

(ಇಂತಹ ಓಟ್ಟು 9 ನುಡಿಗಳಿವೆ)

ಕೀರ್ತನೆಗಳಲ್ಲಿ **ಸಂವಾದ**ಗಳ ಸ್ವಾರಸ್ಯವನ್ನೂ ಕಾಣಬಹುದು. ಶ್ರೀ ಶ್ರೀಪಾದರಾಜರ ಈ ಮುಂದಿನ ಕೀರ್ತನೆಯಲ್ಲಿ ರುಕ್ಮಿಣೀ ಹಾಗೂ ಸತ್ಯಭಾಮೆಯರ ಸಂವಾದ–ಜಗಳದ ಮೂಲಕ ಶ್ರೀ ಕೃಷ್ಣನ ವರ್ಣನೆ ನಡೆಯುತ್ತದೆ. ಈ ಕೀರ್ತನೆಯ ಒಂದು ಭಾಗವನ್ನು ಇಲ್ಲಿ ಕೊಡಲಾಗಿದೆ :

ಕಂಜನೇತ್ರೇ ಶುಭ ಮಂಜುಳಗಾತ್ರೆ
ಕುಂಜರದಂತೆ ಗಮನೆ ರಂಜಿತಾಂಗಿ ನಿರಂಜನಾಂಗಿ । ಪ ।

ಧರೆಯ ಮ್ಯಾಲೆ ಹಿರಿಯಳು ನಾ–
ನಿರಲು ಲಜ್ಜೆ ತೊರೆದು ನೀನು
ಸರಸವಾಡೋರೆ ಮುರಹರನ
ಕರೆದು ಭಾಮಿನಿ ಸುಗುಣೆ ಕಾಮಿನಿ ।1।

ಪತಿಯ ಪ್ರೀತಿ ಎನ್ನ ಮ್ಯಾಲೆ
ಅತಿಶಯದಿ ಇರಲು ಜ್ಯೇಷ್ಠ
ಸತಿಯಳೇನೇ ನೀನು ನೋಡು
ಮತಿಯ ರುಗ್ಮಿಣಿ ಸುಪದ್ಮಗಂಧಿನಿ ।2।

ಒಂದು ಕಾಲದಲ್ಲಿ ದಾಸಿ–
ಯಿಂದ ಪತಿಯು ಸರಸವಾಡಲು
ಬಂದಳೇನೇ ಅರಸಿ ಸಮ–
ಳೆಂದು ಭಾಮಿನಿ ಸುಗುಣೆ ಕಾಮಿನಿ ।3। (ಒಟ್ಟು 17 ನುಡಿಗಳಿವೆ)

## (2) ಉಗಾಭೋಗ

ಉಗಾಭೋಗಗಳು ವಿಷಯಪ್ರಧಾನವಾದ ರಚನೆಗಳು; ತಾಳದ ಕಟ್ಟುಪಾಡಿಗೆ ಒಳಪಡುವುದಿಲ್ಲ, ಸಾಲುಗಳ ನಿರ್ಬಂಧವಿಲ್ಲ; ನಮಗೆ ಬೇಕೆನಿಸುವ ರಾಗವನ್ನು

ಅಳವಡಿಸಬಹುದಾದ ಸರಳ ರಚನೆಗಳು. ಇವುಗಳು ಕಾವ್ಯವಾಚನದಂತೆ ನಿಧಾನವಾಗಿ ಬಿಡಿಸಿ ಬಿಡಿಸಿ ಹಾಡುವಂಥ ರಚನೆಗಳು. ಇವುಗಳಲ್ಲಿ ದಾಸರು ತುಂಬಾ ಅಡಕವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಹರಿನಾಮ ಮಹಿಮೆ, ಹರಿಭಕ್ತಿ, ಹರಿದಾಸರ ಅನುಭವ ಉಗಾಭೋಗಗಳ ವಸ್ತು. ಉಗಾಭೋಗಗಳಲ್ಲಿ ದ್ವಿತೀಯಾಕ್ಷರ ಪ್ರಾಸವಿದ್ದು ಕೊನೆಯ ಸಾಲುಗಳಲ್ಲಿ ಅಂಕಿತವಿರುತ್ತದೆ.

ಉಗಾಭೋಗಕ್ಕೆ ಉದಾಹರಣೆ, ಶ್ರೀ ವಿಜಯದಾಸರ ಒಂದು ರಚನೆ :–

ಒಂದು ಕೈಯಲ್ಲಿ ಖಡ್ಗ ಒಂದು ಕೈಯಲ್ಲಿ ಹಲಗೆ
ಅಂದವಾಗಿ ಪಿಡಿದುಕೊಂಡು ದಿವಾರಾತ್ರಿಯಲ್ಲಿ
ಬಂದು ಬದಿಯಲ್ಲಿ ಬಾರಾಸನಾಗಿ
ಹಿಂದು ಮುಂದುಪದ್ರವಾಗದಂತೆ
ಇಂದಿರೇರಮಣ ಕಾಯುತ್ತಲಿರೆ ಎನಗಾವ
ಬಂಧನಗಳಿಲ್ಲ ಧನ್ಯ ಧನ್ಯ
ಕಂದರ್ಪನಯ್ಯ **ವಿಜಯವಿಠಲ**ರೇಯ
ಎಂದೆಂದಿಗಾಪತ್ತು ಬರಲೀಸನೊ ॥

ಕೆಲವು ಸಂಗೀತಗಾರರಲ್ಲಿ ಬಂದಿರುವ ಅಭ್ಯಾಸವೆಂದರೆ ಒಂದು ಉಗಾಭೋಗವನ್ನು ಹಾಡಿ, ನಂತರ ಅದೇ ರಾಗದಲ್ಲಿ ಒಂದು ಕೀರ್ತನೆಯನ್ನು ಹಾಡುವುದು. ಕೀರ್ತನೆಯನ್ನು ಪ್ರಾರಂಭ ಮಾಡುವ ಮುನ್ನ, ಆಲಾಪನೆಯನ್ನು ಕೇವಲ 'ಅ'ಕಾರದಲ್ಲಿ ಹಾಡುವ ಬದಲು, ಉಗಾಭೋಗದ ಸಾಹಿತ್ಯವನ್ನು ಆಲಾಪನೆಗಾಗಿ ಬಳಸಿಕೊಳ್ಳುತ್ತಿದ್ದಾರೆ. ಉಗಾಭೋಗಗಳು ಬಿಡಿ ರಚನೆಗಳು. ಆದ್ದರಿಂದ ಕೀರ್ತನೆಗೆ ಮಾತ್ರವಲ್ಲದೆ ಬೇರೆಬೇರೆಯಾಗಿಯೂ ಹಾಡಬಹುದು. ಈ ವಿಧಾನದಿಂದ ಉಗಾಭೋಗಗಳಿಗೆ ಪ್ರಚಾರ ಸಿಕ್ಕಿದೆಯಾದರೂ, ಬಿಡಿಯಾಗಿ ಹಾಡುವುದು ಕಡಿಮೆಯಾಗಿದೆ. ಒಂದು ಉಗಾಭೋಗವನ್ನು ಸ್ವತಂತ್ರವಾಗಿ ಹಾಡಿ ನಿಲ್ಲಿಸಿದರೆ ಹಾಡುಗಾರರು ಕೂಡಲೇ ಒಂದು ಕೀರ್ತನೆಯನ್ನು ಹಾಡುತ್ತಾರೆ ಎಂದು ಜನ ಕಾಯುತ್ತಾರೆ.

**(3) ಸುಳಾದಿ :** ಸುಳಾದಿಗಳು ಹರಿದಾಸರು ಬಳಸಿರುವ ಇನ್ನೊಂದು ವಿಶಿಷ್ಟ ರಚನೆ.

ಸಂಗೀತ ಸಂಬಂಧದಲ್ಲಿ ಪ್ರಬಂಧ ಎಂದರೆ ಸಾಮಾನ್ಯ ಅರ್ಥದಲ್ಲಿ ಹಾಡು. ಅದರಲ್ಲಿ ಒಂದು ಪ್ರಕಾರ ಸೂಡಪ್ರಬಂಧ. ಸೂಡಪ್ರಬಂಧದಲ್ಲಿ ಸಾಳಗ ಸೂಡ ಎನ್ನುವುದು ಒಂದು ಭಾಗ. ಈ ಸಾಳಗ ಸೂಡಗಳೇ ಕ್ರಮೇಣವಾಗಿ ಸುಳಾದಿಗಳಾದವು.

ಹಿಂದೆ ಇವುಗಳನ್ನು 7 ಬೇರೆ ಬೇರೆಯಾದ ರಚನೆಗಳೆಂದು ಪರಿಗಣಿಸಿ, ಒಂದೊಂದನ್ನೂ ಒಂದೊಂದು ನಿರ್ದಿಷ್ಟ ತಾಳದಲ್ಲಿ ಹಾಡುವ ಸಂಪ್ರದಾಯವಿದ್ದು ಮುಂದೆ ಇಂತಹ 7 ರಚನೆಗಳನ್ನು ಸೇರಿಸಿ ಒಂದೇ ಹಾಡಿನ ಹಾಗೆ ಹಾಡುವ ಪದ್ಧತಿ ಬಂದಿತು ಎಂದು ಅಭಿಪ್ರಾಯವಿದೆ. ಹೀಗೆ, ಬೇರೆ ಬೇರೆ ಪ್ರಬಂಧಗಳನ್ನು ಅಂದರೆ ಕೆಲವು ಸೂಡಗಳನ್ನು ಸೇರಿಸಿ ಸೂಡಾದಿ ಆಯಿತು. ಇವು ತಾಳಪ್ರಧಾನವಾದ ರಚನೆಗಳು. ಒಂದೊಂದು ನುಡಿಯೂ ಒಂದೊಂದು ತಾಳದಲ್ಲಿದ್ದು ಅಂತಹ ಐದು ಅಥವಾ ಏಳು ನುಡಿಗಳಿರುತ್ತವೆ. ಎಲ್ಲ ನುಡಿಗಳಲ್ಲೂ ಸಾಲುಗಳ ಸಂಖ್ಯೆ ಏಕ ರೀತಿಯಾಗಿ ಇರುವುದಿಲ್ಲ. ಸುಳಾದಿಗಳ ಕೊನೆಯಲ್ಲಿ ಎರಡು ಸಾಲಿನ 'ಜತೆ' ಎಂಬುದಿರುತ್ತದೆ. ಪ್ರತಿಯೊಂದು ನುಡಿಯಲ್ಲಿ ಮತ್ತು ಜತೆಯಲ್ಲಿ ದ್ವಿತೀಯಾಕ್ಷರ ಪ್ರಾಸವಿರುತ್ತದೆ ಮತ್ತು ಕೊನೆಯ ಸಾಲುಗಳಲ್ಲಿ ಅಂಕಿತವಿರುತ್ತದೆ. ಸಾಮಾನ್ಯವಾಗಿ ಕೀರ್ತನೆಯ ಸಾರವು ಅದರ ಪಲ್ಲವಿಯಲ್ಲಿರುವಂತೆ, ಸುಳಾದಿಯ ಸಾರ 'ಜತೆ'ಯಲ್ಲಿರುತ್ತದೆ. ಸುಳಾದಿಗಳು ಕೀರ್ತನೆ, ಉಗಾಭೋಗಗಳಿಗಿಂತ ಕ್ಲಿಷ್ಟವಾದ ರಚನೆಗಳು. ದಾಸ್ಯ, ಸಖ್ಯ, ವಾತ್ಸಲ್ಯ, ಹರಿಯ ದಶಾವತಾರಗಳ ವರ್ಣನೆ, ದ್ವೈತತತ್ತ್ವ ನಿರೂಪಣೆ, ಗುರುಕರುಣೆಯ ಮಹತ್ವ – ಎಲ್ಲವೂ ಸುಳಾದಿಗಳಲ್ಲಿ ಮೂಡಿ ಬಂದಿವೆ. ಉದಾಹರಣೆಗೆ ಶ್ರೀ ಗೋಪಾಲದಾಸರ ಒಂದು ರಚನೆ :

## ರಾಗ: ಭೈರವಿ ಶ್ರೀ ಮಂತ್ರಾಲಯ ಸುಳಾದಿ

### ಧ್ರುವತಾಳ

ಧರೆಯೊಳಗೆ ನಮ್ಮ ಗುರು ರಾಘವೇಂದ್ರರಿನ್ನು
ಇರುತಿಪ್ಪ ವಿವರವ ಅರಿತಷ್ಟು ವರ್ಣಿಸುವೆ
ಸ್ಥಿರವಾಗಿ ಮಂತ್ರಾಲಯಪುರ ತುಂಗಾತೀರದಿ
ಹರಿಭಕ್ತಪ್ರಹ್ಲಾದ ವರಯಾಗ ಇಲ್ಲಿ ಮಾಡಿ
ಸುರರಿಗಮೃತಉಣಿಸಿ ಪರಿಪರಿಕ್ರಿಯೆ ಮಾಡಿ
ಪರಿಶುದ್ಧ ಆದನೆಂದು ಅರಿತು ಈ ಸ್ಥಳದಲ್ಲಿ
ಗುರು ರಾಘವೇಂದ್ರರಾಯ ಶರೀರ ಪೋಗಾಡಿಸಿಲ್ಲಿ
ಪರಲೋಕಸಾಧನ ಪರಿಪೂರ್ತಿ ಮಾಡಿಕೊಂಡು
ಸಿರಿಕೃಷ್ಣನ ಚರಣಕ್ಕೆರಗಿ ಸಂತೋಷದಲ್ಲಿ
ಧರೆಯ ಮೇಲಿದ್ದ ಜನರ ಪೊರೆಯಬೇಕೆಂದೆನಲು
ಹರಿ ನೋಡಿದನಿವರ ಪರಮದಯಾಳುತನವ
ಗುರುವಂತರ್ಯಾಮಿಯಾಗಿ ವರವ ನೀಡಲು ಜಗಕೆ
ನರಹರಿ ತಾನೆ ನಿಂದು ನಿರುತ ಪೂಜೆಯಗೊಂಡು

ಸಿರಿವುಳ್ಳ ಕೀರುತಿಯ ಸುರರ ಪಾಲಕ ಚಕ್ರ–
ಧರ ನಾರಾಯಣ ತಾನಿವರ ಸನ್ನಿಧಾನನಾಗಿ–
ವರಿಗೆ ಫಲ ತಂದೀವ ಇಹಪರದಲ್ಲಿ ಇನ್ನು
ಕರುಣಾಕರ ರಂಗ **ಗೋಪಾಲವಿಠಲ** ತನ್ನ
ಶರಣರ ಪೊರೆವಂಥ ಚರಿಯ ಪರಿಪರಿವುಂಟು 1

**ಮಠ್ಯತಾಳ**

ನರಹರಿಕೃಷ್ಣರಾಮಸಿರಿವೇದವ್ಯಾಸ
ಎರಡೆರಡು ನಾಲ್ಕು ಹರಿಮೂರ್ತಿಗಳು
ಪರಿವಾರ ಸಹಿತವಾಗಿ ಸಿರಿಸಹಿತನಿಂದು
ಸುರಗುರು ಮಧ್ವಾಚಾರ್ಯರೆ ಮೊದಲಾಗಿ
ತರುವಾಯದಲ್ಲಿನ್ನು ತಾರತಮ್ಯಾನುಸಾರ
ಪರಿಪರಿಯತಿಗಳು ಇರುತಿಪ್ಪರು ಇಲ್ಲಿ
ಹರುಷದಿಂದಲಿ ವೇದ ಒರೆದು ಶಾಸ್ತ್ರಗಳಿನ್ನು
ಪರಿಪರಿ ಪುರಾಣ ಭಾರತಾಗಮದಲ್ಲಿ
ಸರಿಸರಿ ಬಂದಂತೆ ಸರಿಗಮವೆನುತಲಿ
ಭರದಿಂದಲಿ ಕುಣಿದು ಭಕುತಿಯಿಂದಲಿ ಇನ್ನು
ಹರಿಯ ಪೂಜಿಸುತ ಇರುಳು ಹಗಲು ಬಿಡದೆ
ಪರಿಪರಿ ವಿವರವ ಪರಿಪರಿ ಕೇಳ್ವರು
ಗರುಡವಾಹನ ರಂಗ **ಗೋಪಾಲವಿಠಲ** ತನ್ನ
ಶರಣರ ಪಾಲಿಸುತಿರುತಿಪ್ಪನಿಲ್ಲಿ 2

**ತ್ರಿಪುಟತಾಳ**

ನರಹರಿ ರೂಪನಾಗಿ ವಾಸವಾಗಿ ಇಲ್ಲಿ
ದುರಿತದುಷ್ಕೃತ ಬ್ರಹ್ಮತ್ಯಗಳ ದೂರೋಡಿಸುವ
ಸಿರಿರಾಮನಾಗಿ ವಾಸವಾಗಿ ಇಲ್ಲಿ
ಪರಿಪರಿಯಿಂದ ದೇಶಾಂತರ ಅನ್ನಕಳಕೊಂಡು
ನರರಿಲ್ಲಿ ಬಂದರೆ ಸ್ಥಿರಪಟ್ಟಗಟ್ಟುವ
ಸಿರಿಕೃಷ್ಣನಾಗಿ ವಾಸವಾಗಿ ಇಲ್ಲಿ
ಪರಿಪರಿಯಲ್ಲಿ ಬಂದ ಪರಮಾತುರರಿಗೆ

ವರವೀವ ಪುತ್ರೋತ್ಸವ ಮದುವೆ ಮುಂಜಿ
ಹರಕೆಗಳ ಕೈಕೊಂಡು ಹರುಷಬಡಿಸುವ
ವರ ವೇದವ್ಯಾಸನಾಗಿ ವಾಸವಾಗಿ ಇಲ್ಲಿ
ಭರದಿಂದಲಿ ಬಂದ ದುರ್ವಾದಿಗಳನ್ನೆಲ್ಲ
ದೂರ ಓಡಿಸಿ ಮುರಿದು ಅವರ ಕುಶಾಸ್ತ್ರವ
ಹರಿ ಸರ್ವೋತ್ತಮನೆಂದು ಇರುವನಿಲ್ಲಿ ತೋರಿ
ಶರಣಜನಕೆ ಇನ್ನು ವರಜ್ಞಾನಸುಧೆಯ
ಕರೆದುಕೊಡುತ ಇರುತಿಪ್ಪುವನಿಲ್ಲಿ
ಸಿರಿವಂದಿತಪಾದ **ಗೋಪಾಲವಿಠಲ**
ಪರಿಪರಿಯಲಿ ಓಲಗ ಕೈಕೊಳುತಿಪ್ಪ 3

**ಅಟತಾಳ**

ರಾಘವೇಂದ್ರನೆಂಬ ರೂಪ ತಾನೆಯಾಗಿ
ರಾಘವೇಂದ್ರನೆಂಬ ನಾಮ ಇಡಿಸಿಕೊಂಡು
ರಾಘವೇಂದ್ರರಿನ್ನು ಮಾಡಿದಂಥ ಪುಣ್ಯ
ಭೋಗವರಿತು ತನ್ನ ಭಾಗವತರ ಕೀರ್ತಿ
ಸಾಧಿಸಿ ಸಲಹಲು ಜಗದೊಳಗೆಲ್ಲ
ಮೇಘ ಸುರಿದಂತ ಅಮೋಘ ಕೀರುತಿಯನ್ನು
ರಾಘವ ಇವರಿಗೆ ರಾಜ್ಯದಿ ತಂದಿತ್ತ
ರಾಘವೇಂದ್ರಮೂರುತಿ **ಗೋಪಾಲವಿಠಲ**
ಭಾಗವತರಲ್ಲಿ ಬಹುಪೂಜೆಯನುಗೊಂಬ 4

**ಆದಿತಾಳ**

ದಿನದಿನಕಿಲ್ಲಿ ನೂತನ ಪೂಜೆಗಳಾಗುವುವು
ದಿನದಿನಕಿಲ್ಲಿ ನೂತನ ಉತ್ಸವಗಳಾಗುವುವು
ದಿನದಿನಕಿಲ್ಲಿ ನೂತನ ವಾರ್ತೆಗಳಾಗುವುವು
ಜನರ ಸಂದಣಿ ಪ್ರತಿದಿನ ವಿಪ್ರಭೋಜನ
ಜನರ ಕೈಯಿಂದ ಪ್ರತಿಜನರೀಪ್ಸಿತ ತುಂಬುವರು
ಜನುಮ ಸಫಲ ತಮ್ಮ ಜನನವ ನೀಗುವರು
ದಿನಸಪ್ತಶತವರುಷದಿನಪರಿಯಂತರ

ದಿನಕರಶತತೇಜ ಜಗನ್ನಾಥ ತಾನಿಲ್ಲಿ
ಅನುವಾಗಿ ತಾ ನಿಂದು ಜನರ ಪಾಲಿಪುದ–
ಕ್ಕನುಮಾನ ಸಲ್ಲದು ಗುಣಗಣ ಪರಿ–
ಪೂರ್ಣ **ಗೋಪಾಲವಿಠಲ** ಅರ್ಣೋ–
ರಣೀಯ ಎಂಬುವಗೆ ಎಣೆಯಾರೊ ಜಗದೊಳಗೆ 5

**ಜತೆ**

ಮಂತ್ರಸಿದ್ಧಿಯಕ್ಷೇತ್ರ ಇದು ನೋಡಿ ಕೋವಿದರು
ಮಂತ್ರಪ್ರತಿಪಾದ್ಯ **ಗೋಪಾಲವಿಠಲ**ನಿಂದ

ಸುಳಾದಿಗಳು ಹೆಚ್ಚು ಪ್ರಖ್ಯಾತಿ ಪಡೆದಿಲ್ಲ, ಹಾಡುಗಾರಿಕೆ ಜನಪ್ರಿಯವಾಗಿಲ್ಲ. ಸುಳಾದಿಗಳಲ್ಲಿ ಸಾಹಿತ್ಯ ತುಂಬಾ ಅಡಕವಾಗಿರುತ್ತದೆ, ಕೀರ್ತನೆಗಳಂತೆ ಸರಳವಾಗಿರುವುದಿಲ್ಲ. ಸಾಮಾನ್ಯ ಜನರಿಗೆ ಸಾಹಿತ್ಯ ಸ್ವಲ್ಪ ಮಟ್ಟಿಗಾದರೂ ಅರ್ಥ ಮಾಡಿಕೊಳ್ಳುವುದು ಕಷ್ಟವಾಗುವುದು. ಒಂದೊಂದು ನುಡಿಯ ನಂತರ ತಾಳ ಬದಲಾಗುವುದರಿಂದ ರಾಗ ಸಂಯೋಜನೆ ಮಾಡುವುದು ಮತ್ತು ಹಾಗೆ ಹಾಡುವುದು ಹೆಚ್ಚಿನ ತಾಳಗಳ ಪರಿಚಯ–ಅಭ್ಯಾಸವಿಲ್ಲದವರಿಗೆ ಬಹಳ ಕಷ್ಟವಾಗುವುದು. ಅಲ್ಲದೆ ಅವುಗಳನ್ನು ಹಾಡುವುದಕ್ಕೆ ವಿಶೇಷ ತರಬೇತಿ ಬೇಕಾಗುವುದು.

## (4) ವೃತ್ತನಾಮ

ಒಂದು ಪದ, ಒಂದು ಶ್ಲೋಕ, ಒಂದು ಪದ – ಈ ಕ್ರಮದಲ್ಲಿ ಮುಂದುವರಿಯುವ ರಚನೆ ವೃತ್ತನಾಮ. ಉದಾಹರಣೆಗೆ ಶ್ರೀ ವ್ಯಾಸರಾಜತೀರ್ಥರ ರಚನೆಯ ಒಂದು ಭಾಗವನ್ನು ಇಲ್ಲಿ ಕೊಡಲಾಗಿದೆ :

ಕೇಳಯ್ಯ ಎನ್ನ ಮಾತ ಪಾರ್ಥನೆ ಗೀತದರ್ಥನೆ । ಪ ।

**ಶ್ಲೋಕ** : ಕುರುಕ್ಷೇತ್ರದಿ ಎನ್ನವರು ಪಾಂಡವರು
ಪೇಳೋ ಸಂಜಯ ಏನು ಮಾಡುವರು ಕೂಡಿ
ಕೇಳೈ ಅರಸನೆ ನೋಡು ಪಾಂಡವರ ಸೇನಾ
ಮಾತಾಡಿದ ನಿನ್ನ ಸುತಗೆ ದ್ರೋಣ ನಿಂತು

**ಪದ** : ಕೇಳಿ ತಾ ಪಾರ್ಥನು ಕುರುದಂಡ ರಣದಲಿ ಚಂಡ
ಗಾಂಡೀವ ಕರದಂಡ ಅಚ್ಯುತ ಪಿಡಿ ರಥ

ನಡೆ ಮುಂದಾ ಬಹುತ್ವರದಿಂದ ನೋಡುವೆ ನೇತ್ರದಿಂದ
ಗುರುಹಿರಿಯರ ಕೂಡ ಯಾಕೆಂದ
ಯುದ್ಧ ಸಾಕೆಂದ ಭಿಕ್ಷವೆ ಸುಖವೆಂದ
ಕುಂತಿಸುತ ಈ ಮಾತು ಉಚಿತಲ್ಲ ನಿನಗಿದು ಸಲ್ಲ
ಪಿಡಿ ಗಾಂಡೀವ ಬಿಲ್ಲ ।1।

ಈ ರೀತಿಯ ರಚನೆಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿಲ್ಲವೆಂದು ಹೇಳಲಾಗಿದೆ.

## (5) ದಂಡಕ

ಶ್ರೀ ಶ್ರೀಪಾದರಾಜರ 'ಶ್ರೀ ಲಕ್ಷ್ಮೀನರಸಿಂಹ ಪ್ರಾದುರ್ಭಾವ ದಂಡಕವೇ' ದಾಸ ಸಾಹಿತ್ಯದ ಮೊದಲ ದಂಡಕ. ಇದರಲ್ಲಿ 546 ಸಾಲುಗಳಿವೆ. ಹಿರಣ್ಯಕಶಿಪುವಿನ ಸಂಹಾರಕ್ಕಾಗಿ ವಿಷ್ಣು ನರಸಿಂಹಾವತಾರಿಯಾಗಿ ಬರುವುದು ಇದರ ವಿಷಯ. ಉದಾಹರಣೆಗೆ ಅದರ ಮೊದಲ 10 ಸಾಲುಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ :

ಶ್ರೀರಮಾ ಮಾನಿನೀ ಮಾನಸೇಂದೀವರೋ
ತ್ಫುಲ್ಲ ಸಂಫುಲ್ಲ ಚಂದ್ರಾ ಚಿದಾನಂದ ಸಾಂ –
ದ್ರಾ ಸದಾ ಸನ್ನುತೇಂದ್ರಾ ನಮೋಪೇಂದ್ರ ನಿ –
ಸ್ತಂದ್ರ ನೀ ಕೇಳು, ಆ ರೀತಿ ಪ್ರಹ್ಲಾದನಲ್
ಸಜ್ಜನಾಹ್ಲಾದನಲ್ ದೈತ್ಯ ಸತ್ಪುತ್ರರಾ –
ವೇಳೆ ಶ್ರೀಕಾಂತನ ಜ್ಞಾನ ಭಕ್ತಿ ಕ್ರಿಯಾ
ಗಾಥೆಗಳ್ ಬೋಧೆಗಳ್ ಕೇಳಿ ತಾವೆಲ್ಲರಾ
ಮಾರ್ಗದಲ್ಲೇ ಸುನಿರ್ದಿಷ್ಟ ಸನ್ಮಾರ್ಗದ –
ಲ್ಲೇ ಪರಾಭೂತ ಷಡ್ವರ್ಗದಲ್ಲೇ ಮನ –
ಸ್ಸಿತ್ತು ಧರ್ಮಾರ್ಥ ಕಾಮಸ್ಪೃಹ ಗ್ರಂಥಗಳ್
. . . . . . . . . . . . . . . . . . . . . . .

ಇವರಲ್ಲದೆ ಶ್ರೀ ಕನಕದಾಸರು ಏಳು ದಂಡಕಗಳನ್ನು ರಚಿಸಿದ್ದಾರೆ.

## (6) ತತ್ತ್ವಗ್ರಂಥ

ಜಗನ್ನಾಥದಾಸರು ಕನ್ನಡದಲ್ಲಿ ಮಧ್ವಶಾಸ್ತ್ರದ ಸಾರ ಗ್ರಂಥ ಎನಿಸಿಕೊಂಡ "ಹರಿಕಥಾಮೃತಸಾರ"ವೆಂಬ ಮೇರುಕೃತಿ ರಚಿಸಿದ್ದಾರೆ. ಈ ಗ್ರಂಥದಲ್ಲಿ 32

ಸಂಧಿಗಳಿದ್ದು ಭಾಮಿನಿ ಷಟ್ಪದಿಯಲ್ಲಿ ಒಟ್ಟು 988 ಷಟ್ಪದಿ ಪದ್ಯಗಳಿವೆ. ಈ ಗ್ರಂಥದಲ್ಲಿ ಹೇಳಿರುವ ವಿಷಯಗಳು ಸಾಮಾನ್ಯ ಜನರಿಗೆ ಸುಲಭವಾಗಿ ಅರ್ಥವಾಗುವುದಿಲ್ಲ.

**(7) ವಿಶೇಷ ರಚನೆಗಳು : ಕಾವ್ಯ, ದೀರ್ಘಕೃತಿಗಳು, ಕಥಾಕೀರ್ತನೆಗಳು, ಬಯಲಾಟ, ಲಾವಣಿ, ಕೋಲುಪದ, ನಾಟಕ, ವೆಂಕಟೇಶ ಪಾರಿಜಾತ, ಶ್ರೀನಿವಾಸ ಕಲ್ಯಾಣ, ಲಕ್ಷ್ಮೀ ಶೋಭಾನೆ ಮುಂತಾದವು. ಇವುಗಳು ದೀರ್ಘ ರಚನೆಗಳಾದ್ದರಿಂದ ಉದಾಹರಣೆಗಳನ್ನು ಕೊಟ್ಟಿಲ್ಲ.**

ಹರಿದಾಸರು ಅನೇಕ ಪದಗಳನ್ನು ಸೃಷ್ಟಿಸಿಕೊಂಡಿದ್ದಾರೆ, ಅಂದರೆ coin ಮಾಡಿದ್ದಾರೆ. ಇವು 2 ಅಥವಾ 3 ಪದಗಳನ್ನು ಸೇರಿಸಿ ರಚನೆಯಾದಂತಹ ಸಂಯುಕ್ತ ಪದಗಳು, ಅಂದರೆ compound words; dictionaryಗಳಲ್ಲಿ ಇವುಗಳ ಅರ್ಥ ದೊರೆಯುವುದಿಲ್ಲ. ಪದಗಳನ್ನು ಬೇರ್ಪಡಿಸಿ ಒಂದೊಂದು ಪದಕ್ಕೂ ಅರ್ಥ ಹುಡುಕಿ ನಂತರ ಅದರ ಒಟ್ಟರ್ಥವನ್ನು ತಿಳಿದುಕೊಳ್ಳಬೇಕಾಗುವುದು. ಉದಾಹರಣೆಗೆ: ಕರ್ಣಹೀನಸುಶಯ್ಯ – ಇದರಲ್ಲಿ ಮೂರು ಪದಗಳಿವೆ: ಕರ್ಣ = ಕಿವಿ, ಹೀನ = ಇಲ್ಲದವ ಮತ್ತು ಸುಶಯ್ಯ. ಕಿವಿ ಇಲ್ಲದವ ಶೇಷದೇವರು, ಅವನನ್ನು ಹಾಸಿಗೆಯಾಗಿ ಮಾಡಿಕೊಂಡವ ವಿಷ್ಣು; ವರುಷವೈದರಪೆಸರವ = ನಮ್ಮ 60 ಪ್ರಭವಾದಿ ಸಂವತ್ಸರಗಳಲ್ಲಿ 5ನೆಯದು ಪ್ರಜಾಪತಿ ಸಂವತ್ಸರ, ಪ್ರಜಾಪತಿಯೆಂದರೆ ಬ್ರಹ್ಮ; ನಾರೀಚೋರಪುರ = ಲಂಕೆ; ಅವಸರಮನೆ = ಅಡಿಗೆಮನೆ; ಕೋಡಮುಖಜಾತಿಲಕ = ವರಾಹದೇವರ ಮುಖದಿಂದ ಹುಟ್ಟಿದ ತುಂಗಭದ್ರಾ ತೀರ; ಗಿಳಿನಾಯಿಪೆಸರಿನವರು = ಶುಕ ಮತ್ತು ಶೌನಕ ಋಷಿಗಳು; ಜೀಮೂತನಿಭಶ್ಯಾಮ = ನೀಲಮೇಘಶ್ಯಾಮ, ಕೃಷ್ಣ; ಮಾದೇವಹಾರದವೇಣಿ = ಸರ್ಪದಂತೆ ಹೆರಳುಳ್ಳವಳು, ನೀಲವೇಣಿ[21].

ಯಾವ ಸಂದರ್ಭದಲ್ಲಾಗಲೀ ಹಾಡಲು ಸೂಕ್ತವಾದ ವಿಷಯಗಳನ್ನು ಕುರಿತ ಕೀರ್ತನೆಗಳು ಸಿಗುತ್ತವೆ. ದೇವ ಪೂಜಾ ಸಮಯದಲ್ಲಿ ಹಾಡಲು ಸಾವಿರಾರು ಕೀರ್ತನೆಗಳು ಲಭ್ಯವಿವೆ ಮತ್ತು ನೈವೇದ್ಯದ ಸಮಯದಲ್ಲಿ ಹಾಡಲು ಆರೋಗಣೆಯ, ಆರತಿಯ, ಲಾಲಿ ಮುಂತಾದವುಗಳಿಗೂ ನೂರಾರು ಕೀರ್ತನೆಗಳು ಲಭ್ಯವಿವೆ. ಯತಿಗಳ ಬಗ್ಗೆಯೂ ಸಹಾ ಇಂಥಹ ಸಮಯದಲ್ಲಿ ಹಾಡಲು ಸೂಕ್ತವಾಗುವ “ಲಾಲಿ ಪಾಡುವೆ ರಾಜ ಯತಿಕುಲ ಸುತೇಜ” ಮುಂತಾದ ಕೀರ್ತನೆಗಳು ದೊರೆಯುತ್ತವೆ. ಮಕ್ಕಳಿಗೆ ಊಟಮಾಡುವ ಸಮಯದಲ್ಲಿ “ಬಾರೋ ಮುರಾರಿ. . . . ಆಟ ಸಾಕೇಳೋ, ಮೈಯೆಲ್ಲ ಧೂಳೋ, ಊಟ ಮಾಡೇಳೋ, ಕೃಷ್ಣ ಕೃಪಾಳೊ”, ಅವರು ಅತ್ತರೆ “ಅಳುವುದ್ಯಾತಕೋ ರಂಗಯ್ಯ, ಅತ್ತರಂಜಿಪ ಗುಮ್ಮ”, ಮಲಗಿಸುವಾಗ “ಜೋ ಜೋ ಶ್ರೀಕೃಷ್ಣ ಪರಮಾನಂದ”, “ಜೋ ರಂಗಧಾಮ” ಮುಂತಾದ ನೂರಾರು ಕೀರ್ತನೆಗಳು ದೊರೆಯುತ್ತವೆ. ಮದುವೆ, ಮುಂಜಿ ಮುಂತಾದ ಸಂದರ್ಭಗಳಲ್ಲಿ ಹಾಡಲು ಉರುಟಣೆಯ ಹಾಡುಗಳು, ಸಾಂಪ್ರದಾಯಿಕ ಹಾಡುಗಳು, “ಭಾಗ್ಯದ ಲಕ್ಷ್ಮೀ

ಬಾರಮ್ಮ", "ಬಾರೇ ನಮ್ಮನೀತನಕ ಭಾಗ್ಯದ ದೇವಿ", ಆಶೀರ್ವಾದ ಮಾಡುವಾಗ "ಚಿರಂಜೀವಿಯಾಗೆಲೋ ಚಿಣ್ಣ ನೀನು", ಮಕ್ಕಳಿಗೆ ನೀರೆರೆಯುವಾಗ "ಬಣ್ಣಿಸಿ ಗೋಪಿ ಹರಸಿದಳು" ಮುಂತಾದ ನೂರಾರು ಕೀರ್ತನೆಗಳು ದೊರೆಯುತ್ತವೆ. ಸಾಂಪ್ರದಾಯಿಕ ಸಂದರ್ಭಗಳಲ್ಲಿ ಮಂತ್ರದಿಂದ ಹೇಳಬೇಕಾದ ಮಾತುಗಳನ್ನು ನಮ್ಮ ಮಹಿಳೆಯರು ಈ ರೀತಿಯ ಕೀರ್ತನೆಗಳನ್ನು ಹಾಡಿ ಸಂದರ್ಭವನ್ನು ನಿಭಾಯಿಸುತ್ತಾರೆ.

ಹರಿದಾಸರು ಭಗವಂತನಲ್ಲಿ ಬೇಡಿಕೊಂಡಿರುವ ಕೆಲವು ವಿಷಯಗಳನ್ನು ನೋಡಿದರೆ ಆಶ್ಚರ್ಯವಾಗುತ್ತದೆ. 'ಅಪಮಾನ ಮಾಡಿಸೋ ಕೋಪವನೆ ಹೆಚ್ಚಿಸೊ, ಅಪಹಾಸ್ಯಗೈದಿಸೊ, ಉಪವಾಸದಲ್ಲಿ ಇರಿಸೊ, ಅಪರಾಧವನೆ ಹೊರಿಸೊ' ಎಂದೆಲ್ಲ ದೇವರನ್ನು ಪ್ರಾರ್ಥಿಸುತ್ತಾರೆ. ತಮ್ಮನ್ನು ಹೀಗಿರಿಸಿದರೆ ಪ್ರಾಪಂಚಿಕ ಆಕರ್ಷಣೆಯಲ್ಲಿ ಆಸಕ್ತಿ ಹೋಗಿ, ಭಗವಂತನ ಕಡೆ ಮನಸ್ಸು ತಿರುಗುವುದು ಎಂಬುದು ದಾಸರ ಉದ್ದೇಶ.

ಹರಿದಾಸರ ರಚನೆಗಳನ್ನು ಹಾಡಬೇಕಾದರೆ ರಾಗ ಜ್ಞಾನವು ವಿಶೇಷವಾಗಿ ಇರಬೇಕಾಗಿಲ್ಲ ಮತ್ತು ಅಭ್ಯಾಸವೂ ವಿಶೇಷವಾಗಿ ಬೇಕಾಗಿಲ್ಲ. ಅವುಗಳನ್ನು ಸುಮ್ಮನೆ ಓದಿದರೂ ಸಾಕು. ವೇದ, ಶಾಸ್ತ್ರ, ಪುರಾಣ, ಉಪನಿಷತ್ತು ಮುಂತಾದ ಅನೇಕ ವಿಷಯಗಳ ಬಗ್ಗೆ ತಿಳಿದುಕೊಳ್ಳಬಹುದು.



# 7. ಕೆಲವು ಕೀರ್ತನೆಗಳ ಸಂಕ್ಷಿಪ್ತ ಅರ್ಥ

ಇವು ಪಂಡಿತರುಗಳ ಲೇಖನಗಳಿಂದ ಆಯ್ದ ಸಾರ ಸಂಗ್ರಹವಾದ್ದರಿಂದ,
ಇಲ್ಲಿ ತಿಳಿಸಿರುವುದು ಲೇಖಕರ ಅಭಿಪ್ರಾಯ

## ಶ್ರೀ ಪುರಂದರದಾಸರ ಕೀರ್ತನೆ [22]

**ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ**
**ಮತಿ ಪ್ರೇರಿಸುವಳು ಪಾರ್ವತೀ ದೇವಿಯು ಮು –**
**ಕುತಿ ಪಥಕೆ ಮನವೀವ ಮಹರುದ್ರದೇವರು ಭ –**
**ಕುತಿ ದಾಯಕಳು ಭಾರತೀ ದೇವಿಯು ಯು –**
**ಕುತಿ ಶಾಸ್ತ್ರಗಳಲ್ಲಿ ವನಜಸಂಭವನರಸಿ**
**ಸತ್ಕರ್ಮಗಳ ನಡೆಸಿ ಸುಜ್ಞಾನ ಮತಿಯಿತ್ತು**
**ಗತಿಪಾಲಿಸುವ ನಮ್ಮ ಪವಮಾನನು**
**ಚಿತ್ತದಲಿ ಆನಂದ ಸುಖವನೀವಳು ರಮಾ ಭ –**
**ಕುತ ಜನರೊಡೆಯ ನಮ್ಮ ಪುರಂದರವಿಠಲನು**
**ಸತತ ಇವರಲಿ ನಿಂತು ಕೃತಿಯ ನಡೆಸುವನು ॥**

ಗಣಪತಿಯೆಂದು ಪ್ರಸಿದ್ಧನಾದ ಶ್ರೀ ವಿಘ್ನೇಶ್ವರನು ಸಜ್ಜನರು ಆರಂಭಿಸಿದ ಕಾರ್ಯಗಳಿಗೆ ಒದಗಿ ಬರುವ ವಿಘ್ನಗಳನ್ನು ಪರಿಹರಿಸಿ ಸಿದ್ಧಿಯನ್ನು ನೀಡುತ್ತಾನೆ. ಪಾರ್ವತೀದೇವಿಯು ಮತಿ ಪ್ರೇರಕಳು. ನಮ್ಮ ಬುದ್ಧಿಯನ್ನು ಸತ್ಕಾರ್ಯದಲ್ಲಿ ತೊಡಗುವಂತೆ ಮಾಡುತ್ತಾಳೆ. ಮನೋನಿಯಾಮಕರಾದ ಮಹಾರುದ್ರದೇವರು ಮೋಕ್ಷ ಮಾರ್ಗವಾದ ಸಾಧನಗಳಲ್ಲಿ ನಮ್ಮ ಮನಸ್ಸನ್ನು ಹೊಂದಿಸುವರು. ಮುಕ್ತಿಗೆ ಸಾಧನವಾದ ಭಕ್ತಿಯನ್ನು ನೀಡುವವಳು ಭಾರತೀದೇವಿ. ವನಜಸಂಭವನೆಂದರ ಬ್ರಹ್ಮದೇವರು, ಅವರ ಅರಸಿಯಾದ–ಹೆಂಡತಿಯಾದ ಸರಸ್ವತೀ ದೇವಿಯು ವೇದ ಸಮ್ಮತವಾದ ಯುಕ್ತಿ ಅಂದರೆ ವೇದಾಂತಾದಿ ಶಾಸ್ತ್ರಗಳಲ್ಲಿ ಶುದ್ಧ ಜ್ಞಾನವನ್ನು ಕೊಡುತ್ತಾಳೆ. ಪವಮಾನ ಎಂಬ ಹೆಸರಿನಿಂದ ಖ್ಯಾತರಾದ ಶ್ರೀ ಮುಖ್ಯಪ್ರಾಣದೇವರು ಸತ್ಕರ್ಮಗಳನ್ನು ಆಚರಿಸುವಂತೆ ಮಾಡಿ, ಶಾಸ್ತ್ರಜ್ಞಾನವನ್ನು ನಮ್ಮ ಅನುಭವಕ್ಕೆ ತಂದುಕೊಡುತ್ತಾರೆ.

ಚಿತ್ತದಲಿ–ಮನಸ್ಸಿನಲಿ ಆನಂದವನ್ನು ಮಹಾಲಕ್ಷ್ಮೀದೇವಿಯು ಕರುಣಿಸುತ್ತಾಳೆ. ಭಕ್ತಜನ ಸೇವಿತನಾದ ಶ್ರೀಹರಿಯು ಲಕ್ಷ್ಮೀದೇವಿಯೇ ಮೊದಲಾದ ಈ ಮೇಲೆ ತಿಳಿಸಿದ ಸಕಲ ದೇವತೆಗಳಲ್ಲಿ ಅಂತರ್ಯಾಮಿಯಾಗಿದ್ದು ಈ ಎಲ್ಲ ಕಾರ್ಯಗಳನ್ನು ನಿರಂತರವಾಗಿ ತಾನೇ ನಡೆಸುತ್ತಾನೆ.

## ಶ್ರೀ ಜಗನ್ನಾಥದಾಸರ ಕೀರ್ತನೆ [23]

**ವಿಠಲಯ್ಯ ವಿಠಲಯ್ಯ ಪ**

**ತಟಿತ್‍ಕೋಟಿನಿಭ ಕಾಯೋ ಜಗನ್ನಾಥ**
**ವಿಠಲಯ್ಯ ವಿಠಲಯ್ಯ ಅ.ಪ**

ಭಗವಂತನು 'ತಟಿತ್‍ಕೋಟಿನಿಭ' = ಕೋಟಿ ಕೋಟಿ ಮಿಂಚುಗಳ ಪ್ರಕಾಶದಿಂದ ಕೂಡಿದವನಾಗಿದ್ದಾನೆ. 'ಕಾಯೋ ಜಗನ್ನಾಥ' = ಸಮಸ್ತ ಜಗತ್ತಿಗೆ ಅವನೊಬ್ಬನೇ ಸ್ವಾಮಿಯಾಗಿದ್ದಾನೆ, ರಕ್ಷಕನಾಗಿದ್ದಾನೆ.

**ಭಜಿಸುವೆ ನಿನ್ನನು ಅಜಭವಸುರನುತ**
**ಭಜಕಾಮರತರು ಕುಜನಕುಠಾರಾ 1**

ಅಜಭವಸುರನುತ : ಅಜ = ಬ್ರಹ್ಮ, ಭವ = ರುದ್ರದೇವರು, ಇವರೇ ಮೊದಲಾದ ದೇವತೆಗಳಿಂದ ಭಗವಂತ ವಂದ್ಯನಾಗಿದ್ದಾನೆ. ಭಜಕಾಮರತರು = ತನ್ನ ಭಜನೆ ಮಾಡುವ ಭಕ್ತರಿಗೆ ಕಲ್ಪವೃಕ್ಷದಂತೆ ಇರುವ, ಕುಜನಕುಠಾರಾ = ದುರ್ಜನರನ್ನು ನಿರ್ಮೂಲ ಮಾಡುವ ಕೊಡಲಿಯಂತೆ ಇರುವ ಭಗವಂತನೇ, ನಿನ್ನನ್ನು ಭಜಿಸುತ್ತೇನೆ.

**ನೀ ಕರುಣಿಸದೆ ನಿರಾಕರಿಸಲು ಎನ್ನ**
**ಸಾಕುವರಾರು ದಯಾಪರ ಮೂರುತಿ 2**

ಭಗವಂತನೇ ! ನೀನು ಕರುಣೆ ತೋರಿ ನನ್ನನ್ನು ಉದ್ಧರಿಸದಿದ್ದರೆ ಬೇರೆ ಯಾರು ಸಲಹುವರು ? ನೀನು ದಯಾ ಸಮುದ್ರನಾಗಿರುವಿ.

**ಶರಣಾಗತರನು ಪೊರೆವೆನೆಂಬ ತವ**
**ಬಿರುದು ಕಾಯೋ ಕರಿವರದ ಜಗನ್ನಾಥವಿಠಲಯ್ಯ 3**

ಗಜೇಂದ್ರವರದನಾದ ಜಗನ್ನಾಥವಿಠಲನೇ, ನೀನು ಶರಣಾಗತರ ರಕ್ಷಕ ಎಂಬ ಬಿರುದನ್ನು ಸಾರ್ಥಕ ಮಾಡು ಸ್ವಾಮಿ.

## ಶ್ರೀ ವಾದಿರಾಜತೀರ್ಥರ ಕೀರ್ತನೆ [24]

**ತಾಳುವಿಕೆಗಿಂತ ತಪವು ಇಲ್ಲ ಪ**
**ಕೇಳಬಲ್ಲವರಿಗೆ ಹೇಳುವೆನು ಸೊಲ್ಲ ಅ.ಪ**

ತಾಳುವಿಕೆ ಒಂದು ತಪ ಎಂದೆನುತ್ತಾರೆ ಶ್ರೀ ವಾದಿರಾಜರು ಮತ್ತು ಈ ರಹಸ್ಯವನ್ನು ಕೇಳುವವರಿಗೆ ತಿಳಿಸುತ್ತೇನೆನ್ನುತ್ತಾರೆ.

**ದುಷ್ಟಮನುಜರು ಪೇಳ್ವ ನಿಷ್ಠುರದ ನುಡಿತಾಳು**
**ಕಷ್ಟಬಂದರೆ ತಾಳು ಕಂಗೆಡದೆ ತಾಳು**
**ನೆಟ್ಟ ಸಸಿ ಫಲ ಬರುವ ತನಕ ಶಾಂತಿಯ ತಾಳು**
**ಕಟ್ಟುಬುತ್ತಿಯ ಮುಂದೆ ಉಣಲುಂಟು ತಾಳು 1**

ದುಷ್ಟ ಜನರು ಕಠಿಣವಾದ ಮಾತುಗಳನ್ನಾಡಿದರೆ ತಾಳ್ಮೆಯಿಂದಿರಬೇಕು. ಜೀವನದಲ್ಲಿ ಕಷ್ಟಗಳು ಬಂದರೆ ಗಾಬರಿಯಾಗದೆ, ಅಥವಾ ಉದ್ವೇಗಕ್ಕೆ ಒಳಗಾಗದೆ ಇರಬೇಕು. ಭೂಮಿಯಲ್ಲಿ ಹಾಕಿದ ಬೀಜದಿಂದ ಅಂಕುರಿಸಿದ ಸಸಿಯೊಂದರ ಫಲಕ್ಕಾಗಿ ಹೇಗೆ ಕಾಯುವೆವೋ ಹಾಗೆ ಶಾಂತಿಯಿಂದ ತಾಳು. ಪ್ರಯಾಣಿಕನು ತಾನು ಕಟ್ಟುಕೊಂಡೊಯ್ದ ಬುತ್ತಿಯನ್ನು ಅವನಲ್ಲೇ ಇದ್ದರೂ ಹೇಗೆ ಸಕಾಲಕ್ಕೆ ಉಣ್ಣುವನೋ ಹಾಗೆ ದೈವೇಚ್ಚೆಗೆ ಬರುವ ತನಕ ಸೈರಣೆಯಿಂದಿರಬೇಕು.

**ಹಳಿದು ಹಂಗಿಸುವ ಹಗೆಯ ಮಾತನು ತಾಳು**
**ಸುಳಿನುಡಿ ಕುಹಕ ಕುಮಂತ್ರವನು ತಾಳು**
**ಅಳುಕದಲೆ ಬಿರುಸು ಬಿಂಕದ ನುಡಿಯ ನೀ ತಾಳು**
**ಹಲಧರಾನುಜನನ್ನು ಹೃದಯದಲಿ ತಾಳು 2**

ಹೀಯಾಳಿಸುವ, ದ್ವೇಷಪೂರಿತ ಮಾತುಗಳನ್ನು ಕೇಳಿದಾಗ ಸಹನೆಯಿಂದಿರು. ಸಮಾಜದಲ್ಲಿ ಬಳಸು ನುಡಿಯಾಡುವವರು, ಕುಹಕಿಗಳು, ದುರಾಲೋಚನೆಪರರು ಕುತಂತ್ರದಿಂದ ಮಾಡಬಾರದ್ದನ್ನು–ಆಡಬಾರದ್ದನ್ನು ಮಾಡುವರು. ಇಂಥಹ ಪ್ರಸಂಗದಲ್ಲೂ ಸಹನೆಯಿಂದಿರು. ಕೆಲವೊಮ್ಮೆ ಒರಟಾದ ಮತ್ತು ಸೊಕ್ಕಿನ ಮಾತುಗಳನ್ನು ಕೇಳಿದಾಗ ಹೆದರದಿರು, ಸಹನೆಯಿಂದಿರು. ಬಲರಾಮನ ಅನುಜನಾದ ಶ್ರೀಕೃಷ್ಣನನ್ನು ಹೃದಯದಲ್ಲಿ ನಿಲ್ಲಿಸಿಕೋ.

**ನಕ್ಕುನುಡಿವರ ಮುಂದೆ ಮುಕ್ಕರಿಸದೆ ತಾಳು**
**ಅಕ್ಕಸವ ಮಾಡುವರ ಅಕ್ಕರದಿ ತಾಳು**

**ಉಕ್ಕೋಹಾಲಿಗೆ ನೀರು ಇಕ್ಕಿದಂದದಿ ತಾಳು**
**ಪಕ್ಷೀಶ ಹಯವದನ ಶರಣೆಂದು ಬಾಳು 3**

ನಮ್ಮವರೇ ಆದವರು ನಮ್ಮನ್ನು ಕಂಡು ನಕ್ಕು ನುಡಿವರು, ಅಪಹಾಸ್ಯ ಮಾಡುವರು. ಇಂಥಹ ಪ್ರಸಂಗದಲ್ಲಿ ತಾಳ್ಮೆಯಿಂದಿದ್ದು ಜಾರದಿರು. ನಮ್ಮಲ್ಲಿ ಆಕ್ರೋಷದಿಂದ–ರೋಷದಿಂದ ನಡೆದುಕೊಳ್ಳುವವರನ್ನು ಕಂಡಾಗ ಅಂತಹವರ ಬಗ್ಗೆ ಆದರದಿ, ಪ್ರೀತಿಯಿಂದ ವರ್ತಿಸು; ಉಕ್ಕುತ್ತಿರುವ ಹಾಲಿಗೆ ಒಂದಿಷ್ಟು ನೀರು ಹಾಕಿದಾಗ ಅದು ಹೇಗೆ ಶಾಂತವಾಗುವುದೋ ಹಾಗೆ ವರ್ತಿಸು, ಎಂದರೆ ಮನೋನಿಗ್ರಹವಿರಲಿ ಎಂದರ್ಥ. ಗರುಡಾರೂಢನಾದ ಹಯವದನ ರಕ್ಷಕನೆಂದು ತಿಳಿದು ಬಾಳು.

## ಶ್ರೀ ವ್ಯಾಸತತ್ತ್ವಜ್ಞತೀರ್ಥರ ಕೀರ್ತನೆ [25]

**ಬಡವನ ಮನೋರಥ ಪೂರೈಸು ಸಿರಿಕೃಷ್ಣ**
**ಒಡೆಯ ನೀನಲ್ಲದೆ ಪೂರೈಸುವರಿಲ್ಲ ಪ**

ಅತ್ಯಂತ ದೈನ್ಯದಿಂದ ದಾಸರು ಶ್ರೀಕೃಷ್ಣನಲ್ಲಿ ಬಿನ್ನಹ ಮಾಡಿಕೊಳ್ಳುತ್ತಿದ್ದಾರೆ. ತಾವು ಬಡವರು, ಭಗವಂತ ಎಜಮಾನ ಮತ್ತು ಸಿರಿವಂತ. ಒಡೆಯನಾದ ನೀನಲ್ಲದೆ ನನ್ನ ಬಯಕೆಗಳನ್ನು ಮತ್ತಾರಿಗೂ ಪೂರೈಸುವ ಶಕ್ತಿಯಿಲ್ಲ ಎಂದು ಸ್ತುತಿಸುತ್ತಾರೆ.

**ಕಿವಿಯು ನೀಡಿದುದಕೆ ಎನಗೊಮ್ಮ್ಯಾದರು ಮನೋ**
**ಕುವರಿಯ ಭೃತ್ಯತನ ಕೊಡು ಕಂಡ್ಯ**
**ಸುವಿಮಲತರ ಮತಿಯಾದ ವಿಷ್ಣುರಾತೋ –**
**ದ್ಭವನ ಬಳಿಯಲೊಮ್ಮೆ ನಿಲಿಸಯ್ಯಾ ಹರಿಯೇ 1**

ಮನೋಕುವರಿಯೆಂದರೆ ಸ್ವಾಯಂಭುವ ಮನುವಿನ ಮಗಳಾದ ದೇವಹೂತಿ. ಶ್ರೀಮನ್ನಾರಾಯಣನು ಕಪಿಲನಾಮಕನಾಗಿ ದೇವಹೂತಿಯ ಪುತ್ರನಾಗಿ ಅವತರಿಸಿದನು. ದೇವಹೂತಿಯು ಸಿದ್ಧಾಶ್ರಮದಲ್ಲಿ ವಾಸಮಾಡುತ್ತ ಕಪಿಲ ಋಷಿಯಿಂದ ಉಪದೇಶಿಸಲ್ಪಟ್ಟ ಧರ್ಮವನ್ನು ಅನುಷ್ಠಾನ ಮಾಡುತ್ತ ಕಡೆಯಲ್ಲಿ ಮುಕ್ತಿಯನ್ನು ಪಡೆದಳು. ವಿಷ್ಣುರಾತ ಎಂದರೆ ಪರೀಕ್ಷಿತ್ ಮಹಾರಾಜ; ವಿಷ್ಣುರಾತೋದ್ಭವನೆಂದರೆ ಅವನ ಮಗನಾದ ಜನಮೇಜಯರಾಜ. ಪರಮ ವಿಷ್ಣು ಭಕ್ತ. ಅವನ ಆಸ್ಥಾನದಲ್ಲಿ ನಡೆದ ಧರ್ಮ ಸಭೆಯಲ್ಲಿ ಮಹಾಭಾರತ ಮತ್ತು ಅನೇಕಾನೇಕ ಪುರಾಣೇತಿಹಾಸಗಳೂ ಹೇಳಲ್ಪಟ್ಟವು. ಅವನ ಸಭೆಯಲ್ಲಿ ಅವನ ಬಳಿಯೇ ಇದ್ದರೆ ಮಹಾಭಾರತವನ್ನು ಕೇಳಬಹುದು. ಹೀಗೆ ಕೇಳುತ್ತಿದ್ದರೆ ಕಿವಿ ಎಂಬ ಇಂದ್ರಿಯ ಸಾರ್ಥಕಗೊಳ್ಳುತ್ತದೆ. ಆದ್ದರಿಂದ ತಮ್ಮನ್ನು

ದೇವಹೂತಿಯ ಆಶ್ರಮದಲ್ಲಿ ಮತ್ತು ಜನಮೇಜಯ ರಾಜನ ಸಭೆಯಲ್ಲಿ ನಿಲ್ಲಿಸು ಎಂದು ಬೇಡಿಕೊಳ್ಳುತ್ತಾರೆ.

**ನಯನವು ಕೊಟ್ಟುದಕೆ ಎನ್ನೊಮ್ಮೆ ರಣದಿ ವಿ –**
**ಜಯನ ಬಳಿಯಲೊಮ್ಮೆ ನಿಲಿಸಯ್ಯಾ**
**ಭಯದಿ ಸೂತರ ಸುಮ್ಮನಿಹ ಭೀಷ್ಮಕ ಕುರುಪ –**
**ತಿಯರ ಸಭೆಯಲೊಮ್ಮೆ ನಿಲಿಸಯ್ಯ ಹರಿಯೆ** **2**

ನಯನ ಎಂದರೆ ಕಣ್ಣು. ಕುರುಕ್ಷೇತ್ರದಲ್ಲಿ ಮಹಾಭಾರತದ ಮಹಾಸಂಗ್ರಾಮ ಸಮಯದಲ್ಲಿ ಶ್ರೀಕೃಷ್ಣನು ಭಗವದ್ಗೀತೆಯನ್ನು ಅರ್ಜುನನಿಗೆ ಉಪದೇಶ ಮಾಡುವ ಸಮಯದಲ್ಲಿ ತನ್ನ ವಿಶ್ವರೂಪದ ಅದ್ಭುತ ದರ್ಶನವನ್ನು ನೀಡಿದ. ಆಗ ನೀನು ತೋರಿದ ನಿನ್ನ ದಿವ್ಯ ಸ್ವರೂಪವನ್ನು ನಾನೂ ಒಮ್ಮೆ ಕಣ್ಣಾರೆ ಕಂಡು ಧನ್ಯನಾಗುತ್ತೇನೆ; ಜೊತೆಗೆ ಸೂತರು ಪುರಾಣ ಹೇಳುವ ಸ್ಥಳ, ಭೀಷ್ಮಕ ರಾಜನ ಆಸ್ಥಾನ, ದುರ್ಯೋಧನನ ಸಭೆ ಇಂತಹ ಕಡೆಗಳಲ್ಲಿ ನಾನಿರುವಂತೆ ಮಾಡು. ಅಲ್ಲೆಲ್ಲಾ ನೀನು ತೋರಿದ ಮಂಗಳ ರೂಪಗಳನ್ನು ನೋಡಿ ನೀನಿತ್ತಿರುವ ಈ ಕಣ್ಣುಗಳನ್ನು ಸಾರ್ಥಕ ಪಡಿಸಿಕೊಳ್ಳುತ್ತೇನೆ ಎಂದು ಬೇಡಿಕೊಳ್ಳುತ್ತಾರೆ.

**ರಸನವು ಎನಗಿನ್ನು ಕೃಪೆಮಾಡಿದುದಕೆ ಗೋ –**
**ರಸವ ಕದ್ದು ಮೆಲುವ ಕಾಲದಲ್ಲಿ**
**ಇಸಕೊಂಬ ಗೋವಳರ ಒಳಗೆ ಎನ್ನನು ಒಬ್ಬ**
**ಶಿಶುವಿನ ಮಾಡಿ ಪುಟ್ಟಿಸು ಕಂಡ್ಯ ಹರಿಯೆ** **3**

ರಸನ ಎಂದರೆ ನಾಲಿಗೆ ಎಂಬ ಇಂದ್ರಿಯ. ಕೃಷ್ಣ ಗೋಪಸ್ತ್ರೀಯರ ಮನೆಗಳನ್ನು ಕಳ್ಳತನದಿಂದ ಹೊಕ್ಕು ಹಗ್ಗದ ಜಾಳಿಗೆಯಲ್ಲಿ ಇಟ್ಟಿದ್ದ ಹಾಲಿನ ಮಡಕೆಗಳನ್ನು ಒಡೆದು ಅದರಿಂದ ಹಾಲನ್ನು ಕುಡಿಯುತ್ತಿದ್ದನೆಂದೂ, ಮಿಕ್ಕಿದ್ದನ್ನು ತನ್ನ ಗೆಳೆಯರಾದ ಗೋಪ ಬಾಲಕರಿಗೆ ಹಂಚುತ್ತಿದ್ದನೆಂದೂ ಭಾಗವತದಲ್ಲಿ ವರ್ಣಿಸಲಾಗಿದೆ. ಹಾಗೆಯೇ ಭಗವಂತನು ತಾನು ಸ್ವೀಕರಿಸಿ ಮಿಕ್ಕ ಪ್ರಸಾದವನ್ನು ಭಕ್ತರಿಗೆ ನೀಡುತ್ತಾನೆ ಎಂದು ಹರಿಕಥಾಮೃತಸಾರದಲ್ಲಿ ಹೇಳಿದೆ. ಅಂಥ ಒಬ್ಬ ಗೋಪ ಬಾಲಕನಾಗಿ ನನ್ನನ್ನು ಹುಟ್ಟಿಸು. ನೀನು ಕುಡಿದು ಬಿಟ್ಟ ಕ್ಷೀರ ಪಾನವನ್ನು ಸವಿದು ನೀನಿತ್ತಿರುವ ಈ ನಾಲಿಗೆ ಎಂಬ ಇಂದ್ರಿಯವನ್ನು ಸಾರ್ಥಕ ಪಡಿಸಿಕೊಳ್ಳುವೆ ಎಂದು ದಾಸರು ಭಗವಂತನಲ್ಲಿ ವಿನಂತಿಸಿಕೊಳ್ಳುತ್ತಾರೆ.

**ಎನಗೆ ತ್ವಗೇಂದ್ರಿಯವ ದಯಮಾಡಿದುದಕಿನ್ನು**
**ಜನಕ ಭೀಷ್ಮಕ ಸುತೆಯ ಪದ ಕಂಜರದಿ**
**ಅನುವಾದಿಷ್ಟಕ ಭಾವ ಸರಯೂ ಯಮುನಾ ತೀರ**
**ಜನಿತ ವಾಳುಕ ಭಾವವನು ಕೊಡು ಹರಿಯೆ 4**

ತ್ವಗೇಂದ್ರಿಯದ ಧರ್ಮ ಸ್ಪರ್ಶ. ಸ್ಪರ್ಶಗಳಲ್ಲಿ ಅತ್ಯಂತ ಶ್ರೇಷ್ಠವಾದುದು ಪರಮಾತ್ಮನ ಪಾದ ಸ್ಪರ್ಶ. ಜನಕ–ಭೀಷ್ಮಕ ಸುತೆಯರು ಅಂದರೆ ಸೀತೆ–ರುಕ್ಮಿಣಿಯರು. ಭಗವಂತನ ಮತ್ತು ಅವನ ಮಡದಿಯರ ಪಾದಧೂಳಿಯನ್ನು ತಮ್ಮ ತಲೆಯಲ್ಲಿ ಮುಡಿಯುವ ಬಯಕೆ ದಾಸರದ್ದು. ವಾಳುಕ ಎಂದರೆ ಮರಳು. ತಮ್ಮನ್ನು ಸರಿಯೂ ಅಥವಾ ಯಮುನಾ ನದಿಗಳ ತೀರದಲ್ಲಿರುವ ಮರಳು ರಾಶಿಯಲ್ಲಿನ ಒಂದು ಕಣವಾಗಿ ಮಾಡು ಎಂದು ಪ್ರಾರ್ಥಿಸುತ್ತಾರೆ. ಸರಿಯೂ ನದಿ ಅಯೋಧ್ಯೆಯಲ್ಲಿಯೂ ಮತ್ತು ಯಮುನಾ ನದಿ ಮಥುರಾ ಪಟ್ಟಣದ ಬಳಿಯೂ ಹರಿಯುತ್ತವೆ. ಇವುಗಳ ತಟದಲ್ಲಿ ರಾಮ–ಸೀತೆಯರ, ಕೃಷ್ಣ–ರುಕ್ಮಿಣಿಯರ ಪಾದಸ್ಪರ್ಶ ಮರಳ ಕಣಕ್ಕೆ ದೊರೆಯುತ್ತದೆ. ಅದಕ್ಕಾಗಿ ಅಲ್ಲಿನ ಒಂದು ಮರಳ ಕಣವನ್ನಾಗಿ ನನ್ನನ್ನು ಮಾಡು. ನಿಮ್ಮ ಪಾದಸ್ಪರ್ಶ ಪಡೆದು ನೀನಿತ್ತ ತ್ವಗೇಂದ್ರಿಯವನ್ನು ಸಾರ್ಥಕಪಡಿಸಿಕೊಳ್ಳುತ್ತೇನೆ ಎಂದು ಪ್ರಾರ್ಥಿಸುತ್ತಾರೆ.

**ನಾಸಿಕವು ಇತ್ತುದಕೆ ಗೋಪಿಯ ವಿಹಾರದಿ**
**ವಾಸುದೇವವಿಠಲ ನಿನ್ನ ಕೊರಳೊಳಿದ್ದ**
**ಸೂಸಿ ಬಿದ್ದ ಮಾಲಿಕೆಯ ಕುಸುಮಂಗಳ ಬಲು**
**ವಾಸನ ಲೋಲುಪ ಮಧುಕರ ಭಾವ ನೀಡೋ 5**

ಶ್ರೀ ಕೃಷ್ಣನು ಗೋಪಿಕಾ ಸ್ತ್ರೀಯರೊಡನೆ ನಡೆಸಿದ ರಾಸಕ್ರೀಡೆಯ ಸಮಯದಲ್ಲಿ ಬಹು ಸುಂದರವಾದ, ನಾನಾ ವರ್ಣದ, ನಾನಾ ಸುಗಂಧಭರಿತವಾದ ಹೂ ಮಾಲಿಕೆಗಳನ್ನು ಧರಿಸಿದ್ದನು. ದಿವ್ಯ ನರ್ತನ ಮಾಡುತ್ತಿದ್ದಂತೆ ಆ ಮಾಲಿಕೆಗಳು ಅಲ್ಲಾಡಿ ಅವುಗಳಿಂದ ಹೂಗಳು ಉದುರುತ್ತಿದ್ದವು. ಶ್ರೀಕೃಷ್ಣನ ಅಂಗ ಸ್ಪರ್ಶದಿಂದ ಆ ಹೂಗಳು ಅಪೂರ್ವವಾದ ದಿವ್ಯ ಸುಗಂಧಭರಿತವಾಗಿದ್ದುವು. ಆ ಸುಗಂಧದಿಂದ ಆಕರ್ಷಿತವಾಗಿ ಅದನ್ನು ಪಾನ ಮಾಡಲು ದುಂಬಿಗಳು ಅವಕ್ಕೆ ಮುತ್ತುತ್ತಿದ್ದುವು; ಆ ಸುಗಂಧವನ್ನು ಮತ್ತು ಹೂವಿನ ರಸವನ್ನು ಸೇವಿಸಿ ಪವಿತ್ರಗೊಳ್ಳುತ್ತಿದುವು. ಪಾವನ ಬೃಂದಾವನದಲ್ಲಿ ನನ್ನನ್ನು ಅಂತಹ ಒಂದು ದುಂಬಿಯನ್ನಾಗಿ ಮಾಡು ಎಂದು ವಾಸುದೇವವಿಠಲರು ಪ್ರಾರ್ಥಿಸುತ್ತಾರೆ.

## ಶ್ರೀ ಗುರುಗೋಪಾಲದಾಸರ ಕೀರ್ತನೆ [26]

**ನಾಮದ ಘನತೆ ನಿಮಗೆ ಸಲ್ಲೋದೇ**
**ಶ್ರೀಮಂತ ರಾಘವೇಂದ್ರಸ್ವಾಮಿ ಎಂತೆಂಬ ಪ**

ಈ ಕೀರ್ತನೆಯಲ್ಲಿ ದಾಸರು ಗುರುಗಳ ಶ್ರೀನಾಮದ ಮಹಿಮೆಯನ್ನು ವಿಶೇಷ ರೀತಿಯಲ್ಲಿ ಸ್ತುತಿಸುತ್ತಾರೆ. ರಾಘವೇಂದ್ರರನ್ನು ಶ್ರೀಮಂತ ಎಂದು ಕರೆದಿದ್ದಾರೆ. ಶ್ರೀ ಎಂಬ ಪದಕ್ಕೆ ನಾನಾರ್ಥಗಳಿವೆ. ಗುರುಗಳು ಜ್ಞಾನ, ಭಕ್ತಿ ಯಶಸ್ಸು, ವೈರಾಗ್ಯ, ಮಹಿಮೆ, ವಿದ್ಯೆ ಮುಂತಾದ ಶ್ರೀಗಳನ್ನು ಉಳ್ಳವರಾಗಿದ್ದಾರೆ. ಇದರಿಂದ ಶ್ರೀಮಂತ ಎನಿಸಿದ್ದಾರೆ. ರಾಘವೇಂದ್ರಸ್ವಾಮಿ ಎಂಬ ಹೆಸರಿನಲ್ಲಿ ರಾಘವ, ಇಂದ್ರ ಮತ್ತು ಸ್ವಾಮಿ ಎಂಬ ಮೂರು ಹೆಸರುಗಳು ಒಗ್ಗೂಡಿವೆ. ಅವು ಒಂದೊಂದರ ಮಹಿಮೆಯನ್ನೂ ಹೀಗೆ ಕೊಂಡಾಡುತ್ತಾರೆ.

**ಅಲವಬೋಧರ ಭಾಷ್ಯಾಂಬುಧಿಗೆ ಟೀಕೆಗಳೆಂಬ**
**ಲಲಿತ ಸೇತುವೆಗಟ್ಟಿ ಹರಿದಾಸರ**
**ಸುಲಭದಿಂದ್ಯೆದಿಸಿ ದಶಕರಣಗಳ ಜೈಸಿ**
**ಒಲಿಸಿ ಸವಿದೆ ವಿಷ್ಣುಜ್ಞಾನಪ್ರಕೃತಿಯನು 1**

ರಾಘವ ಎಂದೂ ಕರೆಯಲ್ಪಡುವ ಶ್ರೀರಾಮಚಂದ್ರನು ಮಹಾಸಾಗರಕ್ಕೆ ಸೇತುಬಂಧನ ಮಾಡಿ, ಅದರ ಮೇಲೆ ತನ್ನ ಕಪಿಸೈನ್ಯವನ್ನು ಲೀಲಾಜಾಲವಾಗಿ ಕರೆದೊಯ್ದು, ದಶಕಂಠನೆಂದು ಪ್ರಖ್ಯಾತನಾದ ರಾವಣನನ್ನು ಕೊಂದು, ಮೂಲ ಪ್ರಕೃತಿ ಎನಿಸಿದ ಸೀತಾದೇವಿಯನ್ನು ಸ್ವೀಕರಿಸಿದನು. ಅಂತೆಯೇ ರಾಘವ ಎಂಬ ಹೆಸರುಳ್ಳ ಗುರುಗಳು ಸಮುದ್ರದೋಪಾದಿಯಲ್ಲಿರುವ ಶ್ರೀಮದಾಚಾರ್ಯರ ಗ್ರಂಥಗಳಿಗೆ ಅರ್ಥೈಸಿಕೊಳ್ಳಲು ಸುಲಭವಾಗುವಂತೆ ಟೀಕಾ ಗ್ರಂಥಗಳನ್ನು ರಚಿಸಿದ್ದಾರೆ. ಹರಿದಾಸರಿಗೆ ಅವುಗಳ ಸಹಾಯದಿಂದ ಆ ಗ್ರಂಥಗಳನ್ನು ಅಧ್ಯಯನ ಮಾಡಲು (ದಾಟಲು) ಸಾಧ್ಯವಾಗಿದೆ. ಗುರುಗಳು ದಶೇಂದ್ರಿಯಗಳನ್ನು ಜಯಿಸಿದವರಾಗಿದ್ದಾರೆ. ವಿಷ್ಣುಜ್ಞಾನವೆಂಬ ಸಂಪತ್ತನ್ನು ಪಡೆದಿದ್ದಾರೆ. ಹೀಗೆ ರಾಘವ ಎಂಬ ನಾಮದ ಘನತೆ ಗುರುಗಳಿಗೆ ಸಲ್ಲುತ್ತದೆ ಎಂದು ವರ್ಣಿಸಿದ್ದಾರೆ.

**ಹಲವು ದುರ್ಮತವಾದಿಗಳೆಂಬಾದ್ರಿಗಳ ವಾ-**
**ಕ್ಕುಲಿಶದಿಂದವರ ಪಕ್ಷವ ಛೇದಿಸಿ**
**ಅಲವಬೋಧರಮತ ಅಮರಾವತಿಯಲಿ ನಿ-**
**ಶ್ಚಲ ಸಾಮ್ರಾಜ್ಯವನಾಳ್ದೆ ಕವಿಗಳ ಪೊರೆದೆ 2**

ದೇವೇಂದ್ರನು ಅಮರಾವತಿ ಪಟ್ಟಣದಲ್ಲಿ ನೆಲೆಸಿ ದೇವರಾಜ್ಯವನ್ನು ಆಳುತ್ತಾನೆ. ದೇವತೆಗಳನ್ನು ಕಾಪಾಡುತ್ತಾನೆ. ತನ್ನ ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿ ಅವುಗಳ ಸೊಕ್ಕು ಮುರಿಯುತ್ತಾನೆ. ಹಾಗೆಯೇ ಇಂದ್ರ ಎಂಬ ನಾಮಾಂಕಿತರಾದ ಗುರುಗಳು ಪರವಾದಿಗಳನ್ನು ತಮ್ಮ ವಾಕ್ಚಾತುರ್ಯದಿಂದ, ಗ್ರಂಥ ರಚನೆಯಿಂದ ಭೇದಿಸಿದ್ದಾರೆ. ಶ್ರೀಮದಾನಂದತೀರ್ಥರ ವೇದಾಂತ ಸಾಮ್ರಾಜ್ಯವನ್ನು ಮಂತ್ರಾಲಯವೆಂಬ ಪವಿತ್ರ ಕ್ಷೇತ್ರದಲ್ಲಿ ನೆಲಸಿ ಆಳುತ್ತಿದ್ದಾರೆ. ವಿದ್ವಜ್ಜನರನ್ನು ರಕ್ಷಿಸುತ್ತಿದ್ದಾರೆ. ಇದರಿಂದ ಇಂದ್ರ ಎನ್ನುವ ನಾಮದ ಘನತೆ ಗುರುಗಳಿಗೆ ಸಲ್ಲುತ್ತದೆ ಎಂದು ಕೊಂಡಾಡಿದ್ದಾರೆ.

**ಭಾಸುರ ಸಚ್ಛಾಸ್ತ್ರ ವದನದಿ ಒಪ್ಪುತ**
**ಪೂಶರಜಯಶಕ್ತಿಯನೆ ಧರಿಸಿದೆ**
**ವಾಸವಸಖಗುರುಗೋಪಾಲವಿಠಲನ ದಾಸ**
**ಶ್ರೀಸುಧೀಂದ್ರಕುಮಾರ ಸ್ವಾಮಿರಾಘವೇಂದ್ರ 3**

ಸ್ವಾಮಿ ಎಂದರೆ ರುದ್ರ ಪುತ್ರನಾದ ಕುಮಾರಸ್ವಾಮಿ. ಗುರುಗಳು ಆರು ಮುಖಗಳುಳ್ಳ ಕಾರ್ತಿಕೇಯನಂತೆ ಷಟ್‌ಶಾಸ್ತ್ರ ಸಂಪನ್ನರಾಗಿದ್ದಾರೆ. ಅವನು ದಿವ್ಯ ಶಕ್ತಿಯನ್ನು ಧರಿಸಿದ್ದರೆ ಇವರು ಕಾಮನನ್ನು ಜಯಿಸಿರುವ ಶಕ್ತಿಯನ್ನು ಹೊಂದಿದ್ದಾರೆ. ಕುಮಾರಸ್ವಾಮಿಯು ದೇವೇಂದ್ರನಿಗೆ ಗೆಳೆಯನಾಗಿದ್ದರೆ ಗುರುಗಳು ದೇವೇಂದ್ರನ ಸಖನಾದ ಗುರುಗೋಪಾಲವಿಠಲನ ದಾಸರಾಗಿದ್ದಾರೆ. ಸುಧೀಂದ್ರತೀರ್ಥರ ಕುಮಾರರಾಗಿದ್ದಾರೆ. ಇದರಿಂದ ರಾಘವೇಂದ್ರಸ್ವಾಮಿ ಎಂಬ ಶುಭನಾಮ ಗುರುಗಳಿಗೆ ಸರ್ವರೀತಿಯಲ್ಲೂ ಒಪ್ಪುತ್ತದೆ ಎಂದು ಪ್ರತಿಪಾದಿಸಿದ್ದಾರೆ.



# 8. ಹರಿದಾಸರ ಕೀರ್ತನೆಗಳ ಹಾಡುಗಾರಿಕೆ

ಹರಿದಾಸರ ಮುಖ್ಯ ಉದ್ದೇಶ ಹರಿನಾಮ ಕೀರ್ತನೆ. ಅವರ ಪ್ರತಿಯೊಂದು ರಚನೆಯಲ್ಲಿಯೂ ಒಂದು ಉದ್ದೇಶ ಅಥವಾ ಸಂದೇಶವಿರುತ್ತದೆ. ಒಂದು ಕೀರ್ತನೆಯ ಎಲ್ಲ ನುಡಿಗಳ ಸಾಹಿತ್ಯ ಸೇರಿದಾಗ ಆ ಕೀರ್ತನೆಯ 'ವಸ್ತು' (subject) ಏನೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಎಲ್ಲ ನುಡಿಗಳನ್ನೂ ಹಾಡಿದಾಗ ಆ ಕೀರ್ತನೆಯ ಉದ್ದೇಶ ಸಾರ್ಥಕವಾಗುವುದು. ಪ್ರತಿಯೊಂದು ನುಡಿಯನ್ನು ಹಾಡಿದ ಮೇಲೆ ಅರ್ಥಪೂರ್ಣವಾಗುವಷ್ಟಾದರೂ ಪಲ್ಲವಿಯ ಭಾಗವನ್ನು ಕಡ್ಡಾಯವಾಗಿ ಹಾಡಬೇಕು. ಇದರ ಉದ್ದೇಶವೇನೆಂದರೆ ಕೇಳುವವರಿಗೆ ಕೃತಿಯ ವಸ್ತು ಮತ್ತು ಉದ್ದೇಶಗಳನ್ನು (subject) ಪದೇ ಪದೇ ನೆನಪಿಸುವುದು. ಕೀರ್ತನೆಯ ಕೊನೆಯ ನುಡಿಯಾದ ಮೇಲೆ ಪಲ್ಲವಿ ಮತ್ತು ಅನುಪಲ್ಲವಿಗಳನ್ನು ಸಂಪೂರ್ಣವಾಗಿ ಹಾಡಬೇಕು, ಇಲ್ಲದಿದ್ದರೆ ಸ್ತೋತ್ರ ಪಠಿಸಿದಂತಾಗುವುದು. ಎರಡೆರೆಡು ನುಡಿಗಳನ್ನು ಸೇರಿಸಿ ಹಾಡುವುದು ಸರಿಯಲ್ಲ. ಅದರಿಂದ ಆ ನುಡಿಗಳ ಸಾಲುಗಳಲ್ಲಿ ಪ್ರಾಸ ವ್ಯತ್ಯಾಸವಾಗುವುದಂತೂ ಖಂಡಿತ. ಇಲ್ಲಿ ಮುಖ್ಯವಾಗಿ ಗಮನಿಸಲೇಬೇಕಾದ ಅಂಶವೆಂದರೆ ಹರಿದಾಸರ ರಚನೆಗಳನ್ನು ಜನಸಾಮಾನ್ಯರಿಗೆ ಮುಟ್ಟಿಸಲು ಸಂಗೀತ ಒಂದು ಮಾಧ್ಯಮವಷ್ಟೇ; ಸಂಗೀತವೇ ಮುಖ್ಯವಲ್ಲ, ಅನೇಕರು ಸಂಗೀತಕ್ಕೇ ಪ್ರಾಮುಖ್ಯತೆ ಕೊಟ್ಟು ರಾಗ-ತಾಳವನ್ನಷ್ಟೇ ಗಮನದಲ್ಲಿಟ್ಟು ಅದಕ್ಕೆ ಸಾಹಿತ್ಯವನ್ನು ಮಾಧ್ಯಮವನ್ನಾಗಿ ಉಪಯೋಗಿಸುತ್ತಾರೆ. ಅಲ್ಲದೆ ತಮಗೆ ಸಿಕ್ಕ ಸಾಹಿತ್ಯವನ್ನು ಪರಿಶೀಲಿಸದೆ, ರಾಗ ತಾಳ ಅಳವಡಿಸಿ ಹಾಡುತ್ತಾರೆ.

ಕೀರ್ತನೆಗಳನ್ನು ನಾವು ಹಾಡುವುದು ಭಗವಂತನನ್ನು ಮೆಚ್ಚಿಸಿ ಅವನ ಅನುಗ್ರಹ ಪಡೆಯಲೆಂದು. ಭಕ್ತ ಪ್ರಹ್ಲಾದರಾಜರು ತಿಳಿಸಿರುವ ನವವಿಧ ಭಕ್ತಿಗಳಲ್ಲಿ ಕೀರ್ತನೆ, ಸ್ತುತಿ ಎರಡನೆಯದು ಎಂದು ನೆನಪಿಟ್ಟುಕೊಳ್ಳಬೇಕು. ಶ್ರೀ ಜಗನ್ನಾಥದಾಸರು ತಮ್ಮ ಹರಿಕಥಾಮೃತಸಾರದ (ಸಂಧಿ 2) ಕರುಣಾ ಸಂಧಿಯಲ್ಲಿ ಹೀಗೆ ಹೇಳುತ್ತಾರೆ :

ಮಲಗಿ ಪರಮಾದರದಿ ಪಾಡಲು
ಕುಳಿತು ಕೇಳುವ, ಕುಳಿತು ಪಾಡಲು
ನಿಲುವ, ನಿಂತರೆ ನಲಿವ,
ನಲಿದರೆ ಒಲಿವೆ ನಿಮಗೆಂಬ

ಈ ಸತ್ಯವನ್ನು ಅನೇಕ ಕೀರ್ತನೆಗಳಲ್ಲಿ ಹರಿದಾಸರು ತಿಳಿಸಿದ್ದಾರೆ.

ಪದಭೇದ, ಪದಗಳ ಜೋಡಣೆ, ಸಾಹಿತ್ಯ ವಿಭಾಗ, ಇವುಗಳನ್ನು ಬಹಳ ಸೂಕ್ಷ್ಮವಾಗಿ ಗಮನಿಸಬೇಕು. ಉದಾಹರಣೆಗೆ: 'ಜಗನ್ಮೋಹನನನೆ ಕೃಷ್ಣ' ಎಂಬುದನ್ನು

'ಜಗನ್ಮೋ – ಹನನೆ ಕೃಷ್ಣ' ಎಂದು ಹಾಡಿದರೆ ಹೇಗಿರುತ್ತದೆ ? ಹನನ ಎಂದರೆ ನಾಶ, ಕೊಲೆ. ಹಾಗೆಯೇ "ಓಡಿ ಬಾರಯ್ಯ ವೈ – ಕುಂಠಪತಿ" ಎಂದು ಹಾಡಿದರೆ ಹೇಗಿರುತ್ತದೆ ?

ಇನ್ನು ಸಾಹಿತ್ಯದ ವಿಭಾಗದ ಬಗ್ಗೆ ಗಮನ ಕೊಡಬೇಕು. 'ಚಂದ್ರಚೂಡ ಶಿವಶಂಕರ ಪಾರ್ವತಿ – ರಮಣನೆ ನಿನಗೆ ನಮೋ – ಗಂಗಾ ಶಿರಗಜ ಚರ್ಮಾಂಬರಧರ' ಎಂದು ವಿಭಾಗಿಸಿ ಕೆಲವರು ಹಾಡುತ್ತಾರೆ. ಅದು ಹೀಗಿರಬೇಕು: 'ಚಂದ್ರಚೂಡ ಶಿವಶಂಕರ – ಪಾರ್ವತಿರಮಣನೆ ನಿನಗೆ ನಮೋ – ಗಂಗಾಶಿರ ಗಜಚರ್ಮಾಂಬರಧರ'. ಹಾಗೆಯೇ 'ವಂದಿಸುವುದಾದಿಯಲಿ ಗಣನಾಥನ – ಸಂದೇಹ ಸಲ್ಲಶ್ರೀ – ಹರಿಯಾಜ್ಞೆ ಇದಕುಂಟು' ಎಂದು ಹಾಡುವುದು ಸರಿಯಲ್ಲ; ಅದು ಹೀಗಿರಬೇಕು : 'ವಂದಿಸುವುದಾದಿಯಲಿ ಗಣನಾಥನ – ಸಂದೇಹ ಸಲ್ಲ – ಶ್ರೀಹರಿಯಾಜ್ಞೆ ಇದಕುಂಟು'.

ಹಾಡುವಾಗ ಹಾಡಿನ ವಿಷಯವನ್ನು ಗಮನಿಸಬೇಕು. ಯಾರ ಬಗ್ಗೆ ಅಥವಾ ಯಾವುದರ ಬಗ್ಗೆ ಹಾಡುತ್ತಿದ್ದೇವೆ ಎಂಬುದನ್ನು ಸ್ವಲ್ಪ ಮಟ್ಟಿಗಾದರೂ ತಿಳಿದುಕೊಳ್ಳುವುದು ಬಹಳ ಅವಶ್ಯ. ಪದಗಳ ಅರ್ಥ ಸರಿಯಾಗಿ ತಿಳಿದುಕೊಳ್ಳದೆ ಹಾಡುವುದುಂಟು. 'ಶರಣು ಸಿದ್ಧಿ ವಿನಾಯಕ . . . ನಿಟಿಲನೇತ್ರನೆ ದೇವಿಸುತನೆ' ಎಂಬಲ್ಲಿ 'ನಿಟಿಲನೇತ್ರನೆ' ತಪ್ಪು. 'ನಿಟಿಲನೇತ್ರ'ನು (ಹಣೆಯಲ್ಲಿ ಕಣ್ಣಿರುವ) ರುದ್ರದೇವರು, ಅವರ ದೇವಿ ಪಾರ್ವತಿಯ ಸುತ ವಿನಾಯಕ. ಹಾಗಾಗಿ 'ನಿಟಿಲನೇತ್ರನ' ಎಂಬುದು ಸರಿಯಾದ ಪದ. ಹಾಗೆಯೇ 'ನಮ್ಮಮ್ಮ ಶಾರದೆ . . . . ಕಮ್ಮಗೋಲನವೈರಿಸುತನಾದ ಸೊಂಡಿಲ ಹೆಮ್ಮೆಯ ಗಣನಾಥನೆ'ಎಂಬಲ್ಲಿ 'ಹೆಮ್ಮೆಯ' ತಪ್ಪು, 'ಹೆಮ್ಮೈಯ' (ದೊಡ್ಡ ದೇಹ) ಸರಿ.

ಒಂದು ಸಾಲನ್ನು ಒಂದು ಆವರ್ತದಲ್ಲೆ ಹಾಡಲು ಪ್ರಯತ್ನಿಸಿ, ಆ ಸಾಲಿನ ಕೊನೆಯಲ್ಲಿ ನಿಲ್ಲಿಸಿ ಮತ್ತೆ ಅದೇ ಸಾಲನ್ನು ಎರಡನೆಯ ಬಾರಿ ಹಾಡುವುದು ಅಥವಾ ವಿರಾಮ (pause) ಕೊಟ್ಟು ಮುಂದುವರಿಯುವುದು ಅನೇಕ ಬಾರಿ ಸಾಹಿತ್ಯಕ್ಕೆ ಸರಿ ಹೊಂದುವುದಿಲ್ಲ, ಅಂದರೆ ಸಾಹಿತ್ಯದ ಅರ್ಥದಲ್ಲಿ ಗೊಂದಲವಾಗುವುದು. ಉದಾಹರಣೆಗೆ, ಶ್ರೀ ವಾದಿರಾಜರ 'ಬಾಲನೇನೆ ನಿನ್ನ ಮಗನು ಗೋಪಾಲಕೃಷ್ಣನು' ಎಂಬ ಕೀರ್ತನೆಯ ಒಂದು ನುಡಿಯು ಹೀಗಿದೆ : –

ಮಡುವಿನಲ್ಲಿ ಅಡಗಿಯಿರುವ ಪೊಡವಿ ದೊಡ್ಡನೆತ್ತಿ ಪೊರೆವ
ಅಡವಿಯಲ್ಲಿ ಆಡುತಿರುವ ಕಡುಕ್ರೂರ ಹಿಡಿದ ಹಟವ
ಹುಡುಗನಾಗಿ ಪೊಡವಿ ಬೇಡಿದ ಕೊಡಲಿ ಪಿಡಿದು
ಕಡಿದು ಕ್ಷತ್ರಿಯರ ಕುಲವ ತರಿದನೆ ರಾವಣಾದಿ

ಪಡೆಯನೆಲ್ಲ ಸಂಹರಿಸಿದ ಶ್ರೀರಾಮಚಂದ್ರ
ತುಡುಗುಮಾಡಿ ಗಡಿಗೆಪಾಲ ಕುಡಿದು ಕಡಹದಲ್ಲಿ ಅಡಗಿ
ಬಿಡದೆ ತ್ರಿಪುರರ ವ್ರತವ ಕೆಡಿಸಿ ಪಿಡಿದು ತೇಜಿಯ ನಡೆಸುತಿಹನು ।2।

ಇದು ದಶಾವತಾರಗಳನ್ನೊಳಗೊಂಡ ವಿಷಯ. ಇದನ್ನು ಹೀಗೆ ವಿಭಾಗ ಮಾಡಬೇಕು :

ಮಡುವಿನಲ್ಲಿ ಅಡಗಿಯಿರುವ (ಮತ್ಸ್ಯ), ಪೊಡವಿ ದೊಡ್ಡನೆತ್ತಿ ಪೊರೆವ (ಕೂರ್ಮ), ಅಡವಿಯಲ್ಲಿ ಆಡುತಿರುವ (ವರಾಹ), ಕಡುಕ್ರೂರ ಹಿಡಿದ ಹಟವ (ನರಸಿಂಹ), ಹುಡುಗನಾಗಿ ಪೊಡವಿ ಬೇಡಿದ (ವಾಮನ), ಕೊಡಲಿ ಪಿಡಿದು ಕಡಿದು ಕ್ಷತ್ರಿಯರ ಕುಲವ ತರಿದನೆ (ಪರಶುರಾಮ), ರಾವಣಾದಿ ಪಡೆಯನೆಲ್ಲ ಸಂಹರಿಸಿದ ಶ್ರೀರಾಮಚಂದ್ರ (ರಾಮ), ತುಡುಗುಮಾಡಿ ಗಡಿಗೆಪಾಲ ಕುಡಿದು ಕಡಹದಲ್ಲಿ ಅಡಗಿ (ಕೃಷ್ಣ), ಬಿಡದೆ ತ್ರಿಪುರರ ವ್ರತವ ಕೆಡಿಸಿ (ಬೌದ್ಧ), ಪಿಡಿದು ತೇಜಿಯ ನಡೆಸುತಿಹನು (ಕಲ್ಕಿ) ।2।

ಹೀಗೆಯೇ, 'ಮಾ ಮಝು ಭಾಪುರೇ ಭಳಿರೆ ಹನುಮಂತ' ಎಂಬ ಪುರಂದರದಾಸರ ಕೀರ್ತನೆಯ ಕೊನೆಯ ನುಡಿಯನ್ನು ಈ ರೀತಿ ವಿಭಾಗಿಸಬೇಕು :

ಪ್ರಥಮದಲಿ ಹನುಮಂತ, ದ್ವಿತಿಯದಲಿ ಕಲಿ ಭೀಮ,
ತೃತಿಯದಲಿ ಗುರುಮಧ್ವಮುನಿಯು ಎನಿಸಿ,
ಪ್ರತಿಯಿಲ್ಲದೆಲೆ ಮೆರೆದೆ ಪುರಂದಲವಿಠಲನ –
ಭಕ್ತ, ನಿನಗಾರು ಸರಿ ವಿಜಯ ಹನುಮಂತ ।5।

ಆದ್ದರಿಂದ ಸಾಹಿತ್ಯದ ವಿಭಾಗವನ್ನು ಸರಿಯಾಗಿ ನಿಗದಿಪಡಿಸಿಕೊಂಡು, ಎಲ್ಲೆಲ್ಲಿ ಉಸಿರು ತೆಗೆದುಕೊಳ್ಳಬೇಕೆಂದು ಮೊದಲೇ ನಿಶ್ಚಯಿಸಿ, ಅರ್ಥ ತಿಳಿದು ಹಾಡಬೇಕು. ಅನೇಕ ಬಾರಿ ತಾಳಕ್ಕೆ ಸಾಹಿತ್ಯ ಹೊಂದಿಸಲು ಪ್ರಯತ್ನಿಸಿ, ಕೆಲವು ಅಕ್ಷರಗಳನ್ನು ಅಥವಾ ಕೆಲವು ಬಾರಿ ಒಂದು ಪದವನ್ನೇ ಬಿಟ್ಟುಬಿಡುವುದನ್ನು ಹಾಡುಗಾರಿಕೆಯಲ್ಲಿ ಗಮನಿಸಬಹುದು. ಇದು ಹರಿದಾಸ ಸಾಹಿತ್ಯಕ್ಕೆ ಬಹಳ ದೊಡ್ಡ ಅಪಚಾರ ಮಾಡಿದಂತಾಗುವುದು. ಇಂಥಹ ಸಂದರ್ಭಗಳಲ್ಲಿ ಆ ಸಾಲನ್ನು ಎರಡನೆಯ ಕಾಲದಲ್ಲಿ ಹಾಡಬಹುದು, ಅಥವಾ ಒಂದು ಆವರ್ತವನ್ನು ಹೆಚ್ಚಾಗಿ ತೆಗೆದುಕೊಂಡು 'ಅ'ಕಾರವನ್ನು ಸೇರಿಸಿಕೊಳ್ಳಬಹುದು. ಉಚ್ಚಾರಣೆಗೆ–ಸಾಹಿತ್ಯಕ್ಕೆ ಚ್ಯುತಿ ಬರದಂತೆ ಹೀಗೆ ಹಾಡಿದರೆ ತಪ್ಪೆನಿಸುವುದಿಲ್ಲ.

ಉದ್ದೇಶಪೂರ್ವಕವಾಗಲ್ಲದಿದ್ದರೂ ಕೀರ್ತನೆಗಳ ಸಾಹಿತ್ಯದಲ್ಲಿ ಅನೇಕ ತಪ್ಪುಗಳಾಗಿರುತ್ತವೆ. ಉದಾಹರಣೆಗೆ : ವಿಜಯದಾಸರ 'ಚಿರಂಜೀವಿಯಾಗೆಲೋ ಚಿಣ್ಣ ನೀನು' ಎಂಬ ಕೀರ್ತನೆಯು ಒಂದು ಪ್ರಕಟನೆಯಲ್ಲಿ ಮೊದಲ ನುಡಿಯಲ್ಲಿ 'ಜರಿಯಬ್ಯಾಡ, ಹರಿಯ ಮರೆಯಬ್ಯಾಡೆಂದೆಂದೂ' ಎಂದು ಪ್ರಾರಂಭವಾಗಿ, ಮುಂದೆ 'ಮರೆಯಬ್ಯಾಡನ್ಯ ಸತಿಯ ಸ್ವಪ್ನದಲ್ಲೂ' ಎಂದು ಮುದ್ರಿತವಾಗಿದೆ. ಇಲ್ಲಿ 'ಮರೆಯಬ್ಯಾಡ' ಎಂಬುದು ತಪ್ಪು, ಅದು 'ಬೆರೆಯಬ್ಯಾಡ' ಎಂದಿರಬೇಕು. ಇದರಿಂದ ಎಂಥಹ ತಪ್ಪು ಅರ್ಥ ಬರುವುದೆಂದು ವಿವರಿಸಿ ಹೇಳಬೇಕಾಗಿಲ್ಲ. ಮತ್ತೊಂದು ಗ್ರಂಥದಲ್ಲಿ ಶ್ರೀ ಪಾರ್ವತೀದೇವಿಯರನ್ನು 'ನಾಗಶಯನನ ರಾಣಿ' ಎಂದು ಕರೆಯಲಾಗಿದೆ. ಇದು 'ನಾಗಭೂಷಣನ ರಾಣಿ' ಎಂದಿರಬೇಕು.

ಹಾಡುವಾಗ ಪದಗಳನ್ನು ಎಳೆದೆಳೆದು ಅವುಗಳ ಮಧ್ಯೆ ಆಲಾಪನೆ ಮಾಡುವುದು ಕಂಡುಬಂದಿದೆ. ಮಧ್ವಾಚಾರ್ಯ ಅಥವಾ ಹಯವದನ ಎಂಬ ಪದಗಳನ್ನು ಮಧ್ವಾಆಆಆಆಆಆಆಆಆಆಆಆಆಚಾರ್ಯ, ಹಯವಾಆಆಆಆಆದನ ಎಂದು ಹಾಡುವುದು ಕಂಡು ಬಂದಿದೆ. ತಾಳಕ್ಕೆ ಹೊಂದಿಸಲು ಆಲಾಪನೆಯ ಅವಶ್ಯಕತೆ ಇದ್ದರೆ ಇಂಥಹವುಗಳನ್ನು ಹೀಗೆ ಹಾಡಬಹುದು : ಮಧ್ವಾಚಾರ್ಯಆಆಆಆಆಆಆಆಆ, ಹಯವದನಾಆಆಆಆಆಆ.

ಕೀರ್ತನೆಗಳ ಮಧ್ಯದಲ್ಲಿ ತಮ್ಮದೇ ಆದ ಸಾಹಿತ್ಯವನ್ನು, ಪದಗಳನ್ನು ಸೇರಿಸುವುದು ಸರಿಯಲ್ಲ. ಇದು ಮಹಾನುಭಾವರ-ಅಪರೋಕ್ಷಜ್ಞಾನಿಗಳ ರಚನೆಗಳನ್ನು ಅಕ್ರಮವಾಗಿ ತಿದ್ದಿದಂತಾಗುತ್ತದೆ (tamper). ಆ ರೀತಿಯ ಪದಗಳನ್ನು ಸೇರಿಸುವ ಅವಶ್ಯಕತೆ ಇದ್ದಿದ್ದರೆ, ರಚನಕಾರರೇ ಸೇರಿಸುತ್ತಿದ್ದರು. ಕೀರ್ತನೆಗಳನ್ನು ಮುಕ್ತಾಯ ಮಾಡುವಾಗ ಕೆಲವು ಪದಗಳನ್ನು ಉಪಯೋಗಿಸಿ ನೆರವಲಿನ ರೀತಿಯಲ್ಲಿ ರಾಗ ವಿಸ್ತಾರ ಮಾಡಿ ಹಾಡುವ ಪದ್ಧತಿ ಇದೆ. ಕೀರ್ತನೆಯಲ್ಲಿಲ್ಲದ "ವಿಠಲ, ನಾರಾಯಣ, ಗೋವಿಂದ" ಎಂಬ ಪದಗಳನ್ನು ಬಳಸಿ, ತಾರಸ್ಥಾಯಿಯಲ್ಲಿ (ಎತ್ತರದ ಧ್ವನಿಯಲ್ಲಿ), ಎರಡನೆಯ ಅಥವಾ ಮೂರನೆಯ ಕಾಲದಲ್ಲಿ ಹಾಡಿ, ಕೇಳುವವರಲ್ಲಿ ಆವೇಶ ಹುಟ್ಟಿಸಿ, ಚಪ್ಪಾಳೆ ಗಿಟ್ಟಿಸಲು ಹಾಡುವುದು ಇತ್ತೀಚೆಗೆ ಅಭ್ಯಾಸವಾಗಿದೆ. ಇದು ಜನರನ್ನು ರಂಜಿಸಲು ಹಾಡಿದಂತಾಗುವುದು. ಹರಿದಾಸರ ರಚನೆಗಳ ಮುಖ್ಯ ಉದ್ದೇಶ ಮನರಂಜನೆಯಲ್ಲ. ಇಲ್ಲದ ಪದಗಳನ್ನು ಸೇರಿಸಿ ಹಾಡಿ, ಕೀರ್ತನೆಗೆ ಮೆರುಗು ಕೊಡುವ ಅವಶ್ಯಕತೆ ಇಲ್ಲ. ಬದಲಿಗೆ ಕೀರ್ತನೆಯಲ್ಲಿರುವ ಪದಗಳನ್ನೇ ಉಪಯೋಗಿಸಿ, ರಾಗಾಲಾಪನೆಯಂತೆ ಹಾಡಿ ಕೀರ್ತನೆಯ ಸೌಂದರ್ಯವನ್ನು ಹೆಚ್ಚಿಸಬಹುದು. ಹರಿದಾಸ ಸಾಹಿತ್ಯ ಶತಮಾನಗಳಿಂದ ಉಳಿದು ಬಂದಿದೆ, ಅದಕ್ಕೆ ಪ್ರಚಾರ ಕೊಡಲು ಸಾಹಿತ್ಯವನ್ನು ಬದಲಾಯಿಸುವ ಅವಶ್ಯಕತೆ ಇಲ್ಲ. ಒಂದು ರಚನೆಯ ಸಾಹಿತ್ಯವನ್ನು ಬದಲಾಯಿಸುವ ಅಧಿಕಾರವಿರುವುದು ರಚನಕಾರರಿಗೆ ಮಾತ್ರ. ಕೇಳುವವರಿಗೆ, ಈ ರೀತಿಯಾಗಿ

ಸೇರಿಸಿದ ಹೆಚ್ಚಿನ ಪದಗಳು ಸಹಾ ಕೀರ್ತನೆಯ ಒಂದು ಭಾಗವೆಂದು ತಿಳಿಯುವ ಅಪಾಯವಿದೆ.

ಶ್ರೀ ವಾದಿರಾಜತೀರ್ಥರ ಒಂದು ಕೀರ್ತನೆಯನ್ನು ಗಮನಿಸೋಣ : –

ಆವಕಡೆಯಿಂದ ಬಂದೆ ವಾಜಿ ವದನನೆ
ಭಾವಿಸುವ ವಾದಿರಾಜ ಮುನಿಯ ಕಾಣುತ ಪ

ನೇವರಿಸಿ ಮೈಯ ತಡವಿ ನೇಹದಿಂದಲಿ ಮೇಲು
ನೈವೇದ್ಯವನ್ನು ಇತ್ತು ಭಜಿಸುವೆ ಅ.ಪ

ಭಕುತಿಕಡಲೆ ಜ್ಞಾನವೈರಾಗ್ಯಬೆಲ್ಲದ
ಮುಕುತಿ ಆನಂದಸುಖದ ಕ್ಷೀರ ಲಡ್ಡಿಗೆ
ಯುಕುತಿ ಧ್ಯಾನಕೊಟ್ಟು ನೀನು ಎಲ್ಲ ಮಾತಲಿ
ಶಕುತಿ ಸಂತೋಷ ಮಹಿಮೆ ತೋರಬಂದೆಯ 1

ಹೆತ್ತತುಪ್ಪ ಸಕ್ಕರೆಯ ಮಾಡಿ ಮಡ್ಡಿಯ
ತುತ್ತುಮಾಡಿಕೊಡಲು ಅದನು ಮೆಲುತ ಮೆಚ್ಚುತ
ಅತ್ಯಂತ ಸಂತೋಷ ನೀನು ಆಟತೋರುತ
ಭೃತ್ಯ ವಾದಿರಾಜಮುನಿಯ ಸಲಹ ಬಂದೆಯ 2

ಫಲವಕೊಟ್ಟು ರಕ್ಷಿಸಿದಿ ವಾಜಿವದನನೆ
ನಿಲುವೋ ಜ್ಞಾನಭಕ್ತಿಯನ್ನು ನೀಡಬಂದೆಯ
ಸುಲಭ ಸುಮುಖ ಸುಪ್ರಸನ್ನ **ಹಯವದನ**ನೆ
ಚೆಲುವ ಚಿನ್ಮಯಮೂರ್ತಿ ನಮ್ಮ ಸಲಹ ಬಂದೆಯ 3

ಈ ಕೀರ್ತನೆ ಶ್ರೀಹರಿಯ ಹಯವದನಾವತಾರವನ್ನು ಕುರಿತಾಗಿದೆ. ಈ ಅವತಾರವನ್ನು ವರ್ಣಿಸಲು ಅಥವಾ ಅದರ ಮಹಿಮೆಯನ್ನು ತಿಳಿಸುವುದು ದಾಸರ ಉದ್ದೇಶವಾಗಿರುತ್ತದೆ. ಇದರಲ್ಲಿ ನಾರಾಯಣ, ಗೋವಿಂದ ಆಥವಾ ವಿಠಲ ಎನ್ನುವ ಪದಗಳು ಇಲ್ಲ. ಆದರೆ ಹಾಡುವವರು ಕೀರ್ತನೆಯ ಮಧ್ಯದಲ್ಲಿ ಗೋವಿಂದಾ–ಗೋವಿಂದಾ, ಅಥವಾ ವಿಠ್ಠಲಾ–ವಿಠ್ಠಲಾ ಎಂಬ ಪದಗಳನ್ನು ಉಪಯೋಗಿಸಿಕೊಂಡು, 2–3 ಆವರ್ತಗಳಲ್ಲಿ ಇದನ್ನೇ ಪದೇ ಪದೇ ಉಚ್ಚರಿಸುತ್ತಾರೆ. ಅಲ್ಲದೇ ಕೀರ್ತನೆಯ ಕೊನೆಯಲ್ಲಿಯೂ ಇದೇ ರೀತಿ, ಇಂಥಹ ಪದಗಳನ್ನು ಉಚ್ಚರಿಸಿ ನೆರವಲಿನ ರೀತಿ ಹಾಡುತ್ತಾರೆ. ಇದು ಸರಿಯಲ್ಲ.

ಮತ್ತೊಂದು ದುರದೃಷ್ಟಕರವಾದ ವಿಷಯವೆಂದರೆ, ಮಕ್ಕಳು ತಮ್ಮ ವಯಸ್ಸಿಗೆ ಮೀರಿದಂಥಹ ವಿಷಯಗಳಿರುವ ಕೀರ್ತನೆಗಳನ್ನು ಹಾಡುವುದು (ಉದಾಹರಣೆಗೆ : ಪರಸತಿ, ವಿಷಯ ಸುಖ ಮುಂತಾದವು). ಪ್ರಸಿದ್ಧ ಹಾಡುಗಾರರು ಹಾಡಿದ್ದಾರೆ, ಕೇಳಲು ಹಾಡು ಚೆನ್ನಾಗಿದೆಯೆಂದು ಕಲಿಯುತ್ತಾರೆ ಅಥವಾ ಅವರಿಗೆ ಕಲಿಸಲಾಗುತ್ತದೆ. ಇದು ಸರಿಯಲ್ಲ. ಮಕ್ಕಳ ವಯಸ್ಸಿಗೆ ತಕ್ಕಂಥಹ ವಿಷಯಗಳಿರುವ ಮತ್ತು ಅವರಿಗೆ ಸ್ವಲ್ಪವಾದರೂ ಅರ್ಥ ತಿಳಿಯುವಂತಹ ಕೀರ್ತನೆಗಳನ್ನು ಅವರಿಂದ ಹಾಡಿಸಬೇಕು.[27]

ವಿಶೇಷವಾಗಿ ಮಾಧ್ವ ಸಂಸ್ಥೆಗಳಲ್ಲಿ ಹಾಡುವಾಗ ತಾರತಮ್ಯ ಕ್ರಮವನ್ನು ಅನುಸರಿಸಬೇಕು. ನೆನಪಿಟ್ಟುಕೊಳ್ಳಬೇಕಾದ ಮುಖ್ಯವಾದ ವಿಷಯವೆಂದರೆ, ಕೀರ್ತನೆಗಳನ್ನು ಯಾರು ರಚಿಸಿದ್ದಾರೆಂಬುದು ತಾರತಮ್ಯದ ಲೆಖ್ಖಕ್ಕೆ ಬರುವುದಿಲ್ಲ. ಯಾರ ಬಗ್ಗೆ ಕೀರ್ತನೆ ರಚನೆಯಾಗಿದೆ ಎನ್ನುವುದು ಮುಖ್ಯ. ಉದಾಹರಣೆಗೆ : ಶ್ರೀ ರಾಘವೇಂದ್ರಸ್ವಾಮಿಗಳು ರಚಿಸಿರುವ "ಇಂದು ಎನಗೆ ಗೋವಿಂದ" ಎಂಬ ಕೀರ್ತನೆಯು ಶ್ರೀ ರಾಯರ ಸ್ಥಾನಕ್ಕೆ ಬರುವುದಿಲ್ಲ, ಅದು ಶ್ರೀಹರಿಯ ಸ್ಥಾನಕ್ಕೆ ಬರುವುದು. ಆದ್ದರಿಂದ ಈ ಕೀರ್ತನೆಯನ್ನು ಯತಿಗಳ ಬಗ್ಗೆಯ ಕೀರ್ತನೆಗಳ ಜೊತೆಯಲ್ಲಿ ಹಾಡಬಾರದು.

ಸಾಮಾನ್ಯವಾಗಿ **ಆರೋಹಣದಲ್ಲಿ** ತಾರತಮ್ಯದ ಕ್ರಮ ಹೀಗಿರುತ್ತದೆ: ಮೊದಲು ಹರಿದಾಸರು – ಇವರಲ್ಲಿ ಮೊದಲು ಕಿರಿಯರು, ನಂತರ ಅವರಿಗಿಂತ ಹಿರಿಯರು. ಮುಂದೆ ಯತಿಗಳು – ಇವರಲ್ಲೂ ಮೊದಲು ಕಿರಿಯರು, ನಂತರ ಅವರಿಗಿಂತ ಹಿರಿಯರು. ನಂತರ ನದಿಗಳು, ಶ್ರೀ ವಿಘ್ನೇಶ್ವರ, ಶ್ರೀ ಸುಬ್ರಹ್ಮಣ್ಯ, ಶ್ರೀ ಪಾರ್ವತೀದೇವಿ, ಶ್ರೀ ತುಳಸೀದೇವಿ, ಶ್ರೀ ರುದ್ರದೇವರು, ಶ್ರೀ ಶೇಷದೇವರು, ಶ್ರೀ ಗರುಡದೇವರು, ಶ್ರೀ ಭಾರತಿ–ಸರಸ್ವತಿಯರು, ಶ್ರೀ ಹನುಮ–ಭೀಮ–ಮಧ್ವರು, ಶ್ರೀ ಲಕ್ಷ್ಮೀದೇವಿಯವರ ಬಗ್ಗೆ, ನಂತರ ಶ್ರೀಹರಿಯನ್ನು ಕುರಿತ ಕೀರ್ತನೆಗಳನ್ನು ಹಾಡುವುದು. **ಅವರೋಹಣ**ದ ಕ್ರಮದಲ್ಲಿಯೂ ಹಾಡುವ ಪದ್ಧತಿ ಇದೆ. ಸಾಧಾರಣವಾಗಿ ಪ್ರಾತಃ ಕಾಲದಲ್ಲಿ ಅವರೋಹಣ ಕ್ರಮ ಅನುಸರಿಸುವುದಿದೆ. ಹಾಡುವಾಗ ತಾಳ/ಚಿಟಿಕೆ ತಂಬೂರಿಗಳೊಂದಿಗೆ ಹಾಡಿದಾಗ, ಹಾಡುವಿಕೆ ಇನ್ನಷ್ಟು ಕಳೆಗಟ್ಟುತ್ತದೆ.



# 9. ಹರಿದಾಸ ಸಾಹಿತ್ಯದ ಸಂಗ್ರಹಣೆ, ಸಂಪಾದನೆ, ಪ್ರಚಾರ ಮತ್ತು ಪ್ರಕಟನೆ

ಹರಿದಾಸ ಸಾಹಿತ್ಯದ ಸಂಗ್ರಹಣೆ, ಸಂಪಾದನೆ, ಪ್ರಚಾರ ಮತ್ತು ಪ್ರಕಟನೆಗಾಗಿ ನೂರಾರು ಜನ ಶ್ರಮಿಸಿದ್ದಾರೆ. ಕ್ರಿ.ಶ. 1850ರಲ್ಲಿ ಹರಿದಾಸರ ಕೀರ್ತನೆಗಳನ್ನು ಪ್ರಥಮ ಬಾರಿಗೆ ಪ್ರಕಟಿಸಿದ ಕೀರ್ತಿಗೆ ಪಾತ್ರರಾದವರು ಮಂಗಳೂರಿನ ಕ್ರಿಶ್ಚಿಯನ್ ಮಿಷನರಿಯ ರೆವರೆಂಡ್ ಮೌಗ್ಲಿಂಗ್‌ರವರು. ಲಿಂಗಸುಗೂರಿನ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದ ಶ್ರೀ ಗೋರೆಬಾಳ ಹನುಮಂತರಾಯರು ಊರೂರು ತಿರುಗಿ ಹರಿದಾಸರ ಕೀರ್ತನೆಗಳನ್ನು ಸಂಗ್ರಹಿಸಿ, ಪ್ರಕಟಿಸಿದ ಪುಸ್ತಕಗಳನ್ನು ತಲೆಯ ಮೇಲೆ ಹೊತ್ತು ಊರಿಂದ ಊರಿಗೆ ತೆಗೆದುಕೊಂಡು ಹೋಗಿ ಹಂಚಿದವರು. ಹರಿದಾಸ ಸಾಹಿತ್ಯ ಪ್ರಚಾರಕ್ಕಾಗಿ ದುಡಿದವರು ಇತರರೆಂದರೆ ಶ್ರೀ ಬೇಲೂರು ಕೇಶವದಾಸರು, ಉಡುಪಿಯ ಶ್ರೀ ಪಾವಂಜೆ ಗುರುರಾಯರು, ಬೆಂಗಳೂರಿನ ಶ್ರೀ ದಾಸರ ಲಕ್ಷ್ಮೀನಾರಣಪ್ಪನವರು, ಶ್ರೀ ಸುಬೋಧ ರಾಮರಾಯರು, ಶ್ರೀ ವರವಣಿ ರಾಮರಾಯರು ಮುಂತಾದವರು. ಇವರುಗಳ ತ್ಯಾಗದ ಫಲವಾಗಿ ನಮಗೆ ಇಂದು ಹರಿದಾಸ ಸಾಹಿತ್ಯ ಲಭ್ಯವಿದೆ.

ಹಾಗೆಯೇ ಹರಿದಾಸ ಸಾಹಿತ್ಯದ ಸಂಗ್ರಹ, ಶಾಸ್ತ್ರೀಯ ಸಂಪಾದನೆ ಹಾಗೂ ಅಧ್ಯಯನಗಳಿಗೆ ಸ್ಫೂರ್ತಿ ನೀಡಿದವರು ಮತ್ತು ಪ್ರೋತ್ಸಾಹಿಸಿದವರು ಬೆಂಗಳೂರಿನ ಶ್ರೀ ಹರಿದಾಸರತ್ನಂ ಗೋಪಾಲದಾಸರು, ಡಾ॥ ಶ್ರೀನಿವಾಸ ಹಾವನೂರರವರು, ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಡಾ॥ ಜಿ. ವರದರಾಜರಾಯರು. ಪಿ.ಎಚ್.ಡಿ. ಪಡೆದಿರುವ ಮೈಸೂರಿನ ಡಾ॥ ಶ್ರೀಮತಿ ಟಿ.ಎನ್. ನಾಗರತ್ನ ಮೊದಲಾದ ಅನೇಕ ವಿದ್ವಾಂಸರುಗಳು ಮತ್ತು ಹಿರಿಯ ಸಂಶೋಧಕರು ನಡೆಸುತ್ತಿರುವ ಗ್ರಂಥ ರಚನೆ, ಉಪನ್ಯಾಸ ಮತ್ತು ನೀಡುತ್ತಿರುವ ಮಾರ್ಗದರ್ಶನ ಮತ್ತು ಹರಿದಾಸ ಸಾಹಿತ್ಯದಲ್ಲಿ ಅನೇಕ ವಿಶ್ವವಿದ್ಯಾಲಯಗಳಲ್ಲಿ ಪಿ.ಎಚ್.ಡಿ. ಪದವಿಗಾಗಿ ಸಂಶೋಧನೆ ನಡೆಸುತ್ತಿರುವ ಹಲವರು ಸಂಗ್ರಹಣೆ, ಸಂಪಾದನೆ ಮತ್ತು ಪ್ರಚಾರ ಕಾರ್ಯಗಳಲ್ಲಿ ತೊಡಗಿದ್ದಾರೆ.—

ಹರಿಕಥೆಯ ಮೂಲಕ ಹರಿದಾಸರ ಕೀರ್ತನೆಗಳನ್ನು ಪ್ರಚಾರ ಮಾಡಿದವರು ಪ್ರಸಿದ್ಧ ವಿದ್ವಾಂಸರುಗಳಾದ ಶ್ರೀ ಸೋಸಲೆ ರಾಮದಾಸರು, ಶ್ರೀ ಸೋಸಲೆ ನಾರಾಯಣದಾಸರು, ಶ್ರೀ ಟಿ.ಕೆ. ವೇಣುಗೋಪಾಲದಾಸರು, ಭದ್ರಗಿರಿ ಸಹೋದರರು ಮುಂತಾದವರು ಮತ್ತು ಈಚಿನ ಅನೇಕ ಪ್ರಸಿದ್ಧ ಮಾಧ್ವ ಹರಿಕಥಾ ವಿದ್ವಾಂಸರುಗಳು.

ಪ್ರಚಾರ ಕಾರ್ಯದಲ್ಲಿ ತೊಡಗಿರುವ ಪ್ರಮುಖ ಸಂಸ್ಥೆಗಳೆಂದರೆ ತಿರುಮಲ ತಿರುಪತಿ ದೇವಸ್ಥಾನದ ದಾಸಸಾಹಿತ್ಯ ಪ್ರಾಜೆಕ್ಟ್, ಮಂತ್ರಾಲಯ ಶ್ರೀ ರಾಯರ

ಮಠದ ಹರಿದಾಸ ಸಾಹಿತ್ಯ ಕೇಂದ್ರ, ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ದೇವರಾಯನದುರ್ಗದ ದಾಸಕೂಟ ಸಭಾದವರು. ಮಾಧ್ವ ಮಠಗಳು, ಶ್ರೀ ರಾಯರ ಮಠಗಳು ಮತ್ತು ಮಾಧ್ವ ಸಂಘಗಳು ಆಚರಿಸುತ್ತಿರುವ ಹರಿದಾಸರ ಆರಾಧನೆಗಳು ಮತ್ತು ಅದರ ಅಂಗವಾಗಿ ಏರ್ಪಡಿಸುವ ದಾಸವಾಣಿ ಕಾರ್ಯಕ್ರಮಗಳು, ಹಲವಾರು ಸಂಘ–ಸಂಸ್ಥೆಗಳು ನಡೆಸುತ್ತಿರುವ ದಾಸವಾಣಿ ಕಾರ್ಯಕ್ರಮಗಳು, ಹರಿದಾಸ ಹಬ್ಬಗಳು, ಸ್ಪರ್ಧೆಗಳು, ರಸಪ್ರಶ್ನೆ ಕಾರ್ಯಕ್ರಮಗಳು, ದೇವರನಾಮಗಳನ್ನು ಕಲಿಸುವ online ಕಾರ್ಯಕ್ರಮಗಳು, ತರಬೇತಿ ಶಿಬಿರಗಳು, ಪ್ರವಚನಗಳು, ಉಪನ್ಯಾಸಗಳು, ದೊಡ್ಡ ಮಟ್ಟದಲ್ಲಿ ನಡೆಯುವ ಸಮ್ಮೇಳನಗಳು, ವೆಬ್ ಸೈಟ್‌ಗಳ ಮತ್ತು ಇಂಟರ್‌ನೆಟ್ ಮೂಲಕ, ಹೀಗೆ ವಿವಿಧ ರೀತಿಯಲ್ಲಿ ಹರಿದಾಸ ಸಾಹಿತ್ಯ ಪ್ರಚಾರ ನಡೆಯುತ್ತಿದೆ. ಹರಿದಾಸ ಸಾಹಿತ್ಯಕ್ಕಾಗಿ ಮೀಸಲಾದ ಅನೇಕ ಪತ್ರಿಕೆಗಳು ಪ್ರಕಟನೆಯಾಗುತ್ತಿವೆ. ಅಲ್ಲದೇ ಅನೇಕ ಮಾಧ್ವ ಮಠಗಳ ಮತ್ತು ಮಾಧ್ವ ಸಂಸ್ಥೆಗಳ ಪತ್ರಿಕೆಗಳಲ್ಲಿಯೂ ಹರಿದಾಸ ಸಾಹಿತ್ಯಕ್ಕೆ ಪ್ರಚಾರ ದೊರೆಯುತ್ತಿದೆ. ಹಾಗೆಯೇ ಪ್ರಚಾರ ಕಾರ್ಯದಲ್ಲಿ ಬಹಳ ಮುಖ್ಯವಾದ ಪಾತ್ರ ವಹಿಸುತ್ತಿರುವವರು ನಮ್ಮ ರಾಷ್ಟ್ರದ ಅನೇಕ ರಾಜ್ಯಗಳಲ್ಲಿರುವ ನೂರಾರು ಭಜನಾ ಮಂಡಲಿಗಳು. ಇವುಗಳಲ್ಲಿ ಹೆಚ್ಚಿನವು ಕರ್ನಾಟಕದಲ್ಲಿವೆ. ಮಠಗಳಲ್ಲಿ, ಮನೆಗಳಲ್ಲಿ, ದೇವರ ಪೂಜಾ ಸಮಯದಲ್ಲಿ, ಮದುವೆ ಮುಂತಾದ ಸಂದರ್ಭಗಳಲ್ಲಿ, ಹಬ್ಬಗಳಂದು ಮತ್ತು ಮೆರವಣಿಗೆಗಳಲ್ಲಿ ಸ್ವಯಂಪ್ರೇರಿತರಾಗಿ ಭಾಗವಹಿಸಿ ನಿಸ್ಸಂಕೋಚವಾಗಿ ಹಾಡುತ್ತಾರೆ. ಮಹಿಳೆಯರೇ ಹೆಚ್ಚಾಗಿರುವ ಈ ಮಂಡಲಿಗಳಿಂದ ಹರಿದಾಸರ ಕೀರ್ತನೆಗಳಿಗೆ ಹೆಚ್ಚಿನ ಪ್ರಚಾರ ದೊರೆತಿದೆ.

ಈಗಲೂ ಅನೇಕರು ಕೀರ್ತನೆಗಳನ್ನು ಮತ್ತು ಗ್ರಂಥಗಳನ್ನು ರಚಿಸುತ್ತಿದ್ದಾರೆ. ಈವರೆಗೆ ಹರಿದಾಸ ಸಾಹಿತ್ಯದಲ್ಲಿ ಸಾವಿರಾರು ಗ್ರಂಥಗಳು ಪ್ರಕಟನೆಯಾಗಿವೆಯೆಂದು ಅಂದಾಜು ಮಾಡಬಹುದು. ನನ್ನ ವೆಬ್ ಸೈಟ್ www.dasasahithyamahithi.comನಲ್ಲಿ 800ಕ್ಕೂ ಹೆಚ್ಚಿನ ಗ್ರಂಥಗಳ ಪರಿಚಯ ಕೊಟ್ಟಿದ್ದೇನೆ.



"ಹರಿದಾಸರ ಪದಗಳಲ್ಲಿ ಒಂದು ಅದ್ಭುತ ಶಕ್ತಿಯಿದೆ. ಲಯಬದ್ಧವಾಗಿ ಅರ್ಥಾನುಸಂಧಾನದೊಂದಿಗೆ ಹಾಡಿದ ಕೀರ್ತನೆಗಳನ್ನು ಕೇಳುತ್ತಿರುವಂತೆ ಮನಸ್ಸು ಕರಗುತ್ತದೆ. ಸಂಸಾರದ ತಾಪತ್ರಯ-ಚಿಂತೆಗಳು ದೂರ ತೊಲಗುತ್ತವೆ. ಭಕ್ತಿ ಭಾವ ಉಕ್ಕುತ್ತದೆ. ಅಲೌಕಿಕ ಆನಂದದ ಅನುಭವ ಉಂಟಾಗುತ್ತದೆ. ಕೇಳುವವನಿಗೇ ಇಷ್ಟು ಲಭ್ಯವಾದರೆ, ಇನ್ನು ಹೇಳುವವನಂತೂ ಭಕ್ತಿ ಪರವಶತೆಯಿಂದ ಜಗತ್ತನ್ನೇ ಮರೆತಿರುತ್ತಾನೆ. ಈ ಆನಂದವನ್ನು ಅನುಭವಿಸಲು ಕೀರ್ತನೆಯನ್ನು ಸ್ಪಷ್ಟವಾಗಿ ಅರ್ಥಮಾಡಿಕೊಳ್ಳಬೇಕು. ಅದನ್ನು ರಚಿಸಿದ ದಾಸರ ಮಹತ್ವ, ರಚನೆಯ ಹಿನ್ನೆಲೆ ತಿಳಿದಿರಬೇಕು".[28] ಇದನ್ನು ಹೇಳಿರುವವರು ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಂಶುಪಾಲರಾದ ವಿದ್ವಾನ್ ಡಾ. ಎಚ್. ಸತ್ಯನಾರಾಯಣಾಚಾರ್ಯರು. ಇವರ ಈ ಅಭಿಪ್ರಾಯ ಅಕ್ಷರಶಃ ಸತ್ಯ. ಹೀಗೆ ಕೀರ್ತನೆಯನ್ನು ಅರ್ಥ ಮಾಡಿಕೊಳ್ಳಲು ನಾನು ಹರಿದಾಸರ ಬಗ್ಗೆ, ಅವರ ಜೀವನದ ಬಗ್ಗೆ, ಕೃತಿಗಳ ಸ್ವರೂಪ, ತಾತ್ವಿಕ ನಂಬಿಕೆಗಳ-ಹಿನ್ನಲೆಯ ಬಗ್ಗೆ ಒಂದು ಸ್ಥೂಲ ಪರಿಚಯ ಮಾಡಿಕೊಡಲು ಪ್ರಯತ್ನಿಸಿದ್ದೇನೆ.

ಹರಿದಾಸರ ರಚನೆಗಳನ್ನು ನಾಟ್ಯಕ್ಕೆ, ರೂಪಕಗಳಿಗೆ, ಕೊರವಂಜಿ ಬರುವ ಸನ್ನಿವೇಶ, ಕೋಲಾಟಕ್ಕೆ ಇವುಗಳಿಗೂ ಅಳವಡಿಸಕೊಳ್ಳುವ ಸಾಧ್ಯತೆ ಇವೆ. ಇವುಗಳ ಮೂಲಕ ಶ್ರೀ ದಾಸರುಗಳ ಮುಖ್ಯವಾದ ಉದ್ದೇಶಗಳಾದ ತತ್ತ್ವಜ್ಞಾನ ಪ್ರಚಾರ, ಸಮಾಜ ಸುಧಾರಣೆ ಮುಂತಾದ ವಿಷಯಗಳನ್ನು ಪ್ರಚುರಪಡಿಸಬಹುದು.

ಈಗಾಗಲೇ ತಿಳಿಸಿರುವಂತೆ ನಮ್ಮ ದೇಶದಲ್ಲಿ ಅನೇಕ ಭಕ್ತಿ ಪಂಥಗಳು ಮತ್ತು ಸಂತರೂ ಆಗಿ ಹೋಗಿದ್ದಾರೆ ಮತ್ತು ಈಗಲೂ ಅವರುಗಳ ಅನುಯಾಯಿಗಳು ಭಕ್ತಿ ಗೀತೆಗಳನ್ನು ರಚಿಸುತ್ತಿದ್ದಾರೆ. ಇವುಗಳಲ್ಲಿ ಹರಿದಾಸರ ಕೀರ್ತನೆಗಳನ್ನು ಗುರುತಿಸಲು ಗಮನಿಸಬೇಕಾದ ಅಂಶಗಳೆಂದರೆ, ಅವುಗಳ ಮುಖ್ಯ ವಸ್ತು ಶ್ರೀಹರಿಯ ಸ್ತುತಿ ಆಗಿರಬೇಕು, ಒಂದು ಪಲ್ಲವಿ ಇರಬೇಕು, ದ್ವಿತೀಯಾಕ್ಷರ ಪ್ರಾಸವಿರಬೇಕು, ಅಂಕಿತವಿರಬೇಕು.

ಒಟ್ಟಾರೆ ಹರಿದಾಸರ ಕೀರ್ತನೆಗಳ ಮೂಲಕ ಭಗವಂತನ ಅನುಗ್ರಹ ಸಂಪಾದನೆಯಾಗುವುದು ಎಂಬುದನ್ನು ಮರೆತು ಸಂಗೀತಕ್ಕೆ ಹೆಚ್ಚು ಆದ್ಯತೆ ಕೊಟ್ಟು ಸಾಹಿತ್ಯವನ್ನು ಕಡೆಗಣಿಸಬಾರದು. ಇಲ್ಲಿ ಸಂಗೀತಕ್ಕಾಗಿ ಸಾಹಿತ್ಯವಲ್ಲ ಎಂದು ತಿಳಿದು, ದಾಸರ ಆಶಯದಂತೆ ಸಾಹಿತ್ಯಕ್ಕಾಗಿ ಸಂಗೀತವನ್ನು ಬಳಸಿಕೊಳ್ಳಬೇಕು. ಸಾಹಿತ್ಯಕ್ಕೆ ಹೆಚ್ಚಿನ ಪ್ರಧಾನತೆ ಕೊಟ್ಟು, ಅದರ ಅರ್ಥ ತಿಳಿದು, ಸ್ಪಷ್ಟವಾಗಿ ಉಚ್ಚಾರಣೆ ಮಾಡಿ ಹಾಡಿದಾಗ ಮಾತ್ರ ಭಕ್ತಿ ಉಕ್ಕುವುದು, ಭಾವ ತಾನಾಗಿ ಮೂಡಿಬಂದು ಹಾಡುವಿಕೆಯ ಪ್ರಭಾವ (effect) ಉನ್ನತ ಮಟ್ಟದ್ದಾಗಿರುತ್ತದೆ. ಹೀಗೆ ಹಾಡಿದಾಗ ಹಾಡುಗಾರರಿಗೆ ಅತ್ಯಂತ ಆನಂದವಾಗುವುದಲ್ಲದೇ, ಕೇಳುವವರ ಮನಸ್ಸು ಮತ್ತು ಹೃದಯಗಳನ್ನೂ ಮುಟ್ಟುತ್ತವೆ.

# 10. ಅನುಬಂಧಗಳು

ಅನುಬಂಧಗಳಲ್ಲಿ ಹೆಸರಿಸಿರುವ ಎಲ್ಲ ಯತಿಗಳು ಮತ್ತು ಹರಿದಾಸರು ಕ್ರಿ.ಶ.2000ಕ್ಕೆ ಮೊದಲು ಕಾಲವಾದವರು. ಲೇಖಕನಿಗೆ ರಚನೆಗಳು ದೊರೆತಿರುವ ಹರಿದಾಸರ ವಿಷಯವನ್ನು ಮಾತ್ರ ತಿಳಿಸಲಾಗಿದೆ. ರಚನೆಗಳ ವಿವರಗಳನ್ನು ಆಯಾ ಹರಿದಾಸರ ವಿವರಗಳ ಜೊತೆಯಲ್ಲಿ ಕಂಸಗಳಲ್ಲಿ (in brackets) ಕೊಡಲಾಗಿದೆ.

ಕೀ. = ಕೀರ್ತನೆ, ಉ. = ಉಗಾಭೋಗ, ಸು. = ಸುಳಾದಿ, ವೃ.ನಾ. = ವೃತ್ತನಾಮ, ದೀ.ಕೃ. = ದೀರ್ಘಕೃತಿ

## ಅನುಬಂಧ – 1

## ವಿಜಯದಾಸರು



## 1) ಹಯವದನವಿಠಲ 2) ವೇಣುಗೋಪಾಲವಿಠಲ

1) **ಹಯವದನವಿಠಲ** (ಕ್ರಿ.ಶ. ಸುಮಾರು 1685–1750) ವಿಜಯದಾಸರ ಸಹೋದರರು, ಹೆಸರು ಆನಂದತೀರ್ಥರು, (15ಕೀ. 4 ದೀ.ಕೃ.).

2) **ವೇಣುಗೋಪಾಲವಿಠಲ** (ಕ್ರಿ.ಶ. 1688–1768) ಹೆಸರು ಪಂಗನಾಮ ತಿಮ್ಮಣ್ಣದಾಸರು, (10ಕೀ. 5ಉ. 12ಸು.); ವಾಸಸ್ಥಳ ಆಂಧ್ರ ಪ್ರದೇಶದ ಆದವಾನಿ ನಗರ.



2(1) **ವ್ಯಾಸವಿಠಲ** (ಕ್ರಿ.ಶ.1720–1815/1710–75) ಹೆಸರು ಕಲ್ಲೂರು ಸುಬ್ಬಣ್ಣಾಚಾರ್ಯರು, (20ಕೀ.2ಉ.4ಸು.); ಇವರ ರಚನೆಗಳಲ್ಲಿ ಪ್ರಸಿದ್ಧವಾದುದು 'ಸ್ಮರಿಸಿ ಬದುಕಿರೊ ದಿವ್ಯ ಚರಣಕೆರಗಿರೋ । ದುರಿತ ತರಿದು ಪೊರೆವ ವಿಜಯ ಗುರುಗಳೆಂಬರ' ಎಂಬ ಕೃತಿ.

2(2) **ರಘುಪತಿವಿಠಲ** (ಕ್ರಿ.ಶ.1730–1815) ಹೆಸರು ವೈರಾಗ್ಯಶಾಲಿ ತಮ್ಮಣ್ಣ, (3ಕೀ.2ಉ.5ಸು).

2(3) **ಮುದ್ದುಮೋಹನವಿಠಲ** (ಕ್ರಿ.ಶ. ಸುಮಾರು 1830–98) ಹೆಸರು ದೊಡ್ಡಬಳ್ಳಾಪುರದ ರಾಘವೇಂದ್ರಪ್ಪ (4 ಕೀ. 11 ಉ. 1 ಸು.).



**ತಂದೆಮುದ್ದುಮೋಹನವಿಠಲ** (ಕ್ರಿ.ಶ. 1865–1940) ಹೆಸರು ದೇವರಾಯನದುರ್ಗದ ಪರಮಪ್ರಿಯ ಸುಬ್ಬರಾಯದಾಸರು (5 ಕೀ. 11 ಉ.). 1165 ಜನರಿಗೆ ಅಂಕಿತ ನೀಡಿ, 20ನೆಯ ಶತಮಾನದಲ್ಲಿ ಹರಿದಾಸ ಸಾಹಿತ್ಯದ ಬೆಳವಣಿಗೆಯಲ್ಲಿ ಮಹತ್ತರವಾದ ಪಾತ್ರ ವಹಿಸಿದ್ದಾರೆ.



**ಪ್ರಾಣನಾಥವಿಠಲ,** ಹೆಸರು ಬಾಗೇಪಲ್ಲಿ ಶೇಷದಾಸರು (ಕ್ರಿ.ಶ. 1865–1924). (32 ಕೀ.); ಶ್ರೀ ಹರಿಕಥಾಮೃತಸಾರಕ್ಕೆ **'ಭಾವಪ್ರಕಾಶಿಕೆ'** ಎಂಬ ವ್ಯಾಖ್ಯಾನವನ್ನು ಬರೆದ ಶ್ರೀ **ಪದ್ಮನಾಭದಾಸ**ರೆಂದು ಪರಿಚಿತರಾದ ಪಲ್ಲಡಂ ಮಾಧವಾಚಾರ್ಯರು (ಕ್ರಿ.ಶ. 20ನೆ ಶತಮಾನ); **ರಮಾಕಾಂತವಿಠಲ** (ಕ್ರಿ.ಶ.1906–84), ಹೆಸರು ಚಳ್ಳಕೆರೆ ಕೃಷ್ಣರಾಯರು (86 ಕೀ. 3 ಉ. 1 ಸು.); **ಗುರುಗೋವಿಂದವಿಠಲ** (ಕ್ರಿ.ಶ 1894–1983) ಹೆಸರು ಮೈಸೂರಿನ ಗೋವಿಂದರಾಯರು (484 ಕೀ. 2 ಉ. 1 ಸು. 8 ದೀ.ಕೃ.) (ಇವರು ಅನೇಕ ಗ್ರಂಥಗಳನ್ನು ರಚಿಸಿ ಪ್ರಕಟಿಸಿದ್ದಾರೆ ಮತ್ತು 253 ಜನರಿಗೆ ಅಂಕಿತ ನೀಡಿದ್ದರೆಂದು ತಿಳಿದಿದೆ); **ಉರಗಾದ್ರಿವಾಸವಿಠಲ**ರು (ಕ್ರಿ.ಶ. 1871–1964), ಹೆಸರು ಚಿತ್ರದುರ್ಗದ ಶ್ರೀನಿವಾಸರಾಯರು (91 ಕೀ. 1 ಸು.) ಇವರು 200ಕ್ಕೂ ಹೆಚ್ಚು ಜನರಿಗೆ ಅಂಕಿತ ನೀಡಿದ್ದಾರೆಂದು ಹೇಳಲಾಗಿದೆ – ಇವರಲ್ಲಿ ಒಬ್ಬರು **ನವನೀತಧರತಾಂಡವಕೃಷ್ಣವಿಠಲಾ**ಂಕಿತರಾದ ಹೊಳೆನರಸೀಪುರದ ಭೀಮರಾಯರು (ಕ್ರಿ.ಶ. 1902–1963) (106 ಕೀ. 3 ಸು.); ತಂದೆಮುದ್ದುಮೋಹನವಿಠಲರ **ಮಹಿಳಾ ಶಿಷ್ಯ**ರಲ್ಲಿ ಪ್ರಮುಖರಾದವರ ಬಗ್ಗೆ ಹೆಚ್ಚಿನ ವಿಷಯಗಳು ಮಹಿಳಾ ಹರಿದಾಸರ ವಿಭಾಗದಲ್ಲಿ ಕೊಡಲಾಗಿದೆ.

## ಅನುಬಂಧ 2

## ವಿಜಯದಾಸರು



## 3) ಗೋಪಾಲದಾಸರು

3) **ಗೋಪಾಲದಾಸರು** (ಕ್ರಿ.ಶ. ಸುಮಾರು 1721–1763) ಹೆಸರು ಭಾಗಣ್ಣದಾಸರು, ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕು ಮೊಸರುಕಲ್ಲು ಎಂಬಲ್ಲಿ ಜನಿಸಿದರು. ಆಂಧ್ರಪ್ರದೇಶದ ಮಹಬೂಬನಗರ ಜಿಲ್ಲೆ ಗದ್ವಾಲ ತಾಲ್ಲೂಕಿನ ಐಜಿ ಬಳಿಯ

ಉತ್ತನೂರಿನಲ್ಲಿ ನೆಲೆಸಿದರು. ಮೊದಲು **'ವೆಂಕಟಕೃಷ್ಣ'** ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಲಾರಂಭಿಸಿ, ಮುಂದೆ ವಿಜಯದಾಸರಿಂದ ದೀಕ್ಷೆಯನ್ನು ಸ್ವೀಕರಿಸಿ **'ಗೋಪಾಲವಿಠಲ'** ಎಂಬ ಅಂಕಿತ ಪಡೆದರು (96 ಕೀ. 21 ಉ. 70 ಸು.).



3)(1) ಗೋಪಾಲದಾಸರ ತಮ್ಮಂದಿರಲ್ಲೊಬ್ಬರಾದ **ಗುರುಗೋಪಾಲವಿಠಲ**ರು (ಜನನ ಕ್ರಿ.ಶ. ಸುಮಾರು 1727). ವಾಸಸ್ಥಳ ಉತ್ತನೂರು (43 ಕೀ. 3 ಉ. 1 ಸು. 1 ವೃ.ನಾ.).



ತಿರುಮಲದಾಸರೆಂದು ಪರಿಚಿತರಾದ **ಜನಾರ್ದನವಿಠಲ**ರು (ಕ್ರಿ.ಶ. 1780–1865). ಇವರ ಶಿಷ್ಯರು **ಅಭಿನವಜನಾರ್ದನವಿಠಲ**ರು (ಕ್ರಿ.ಶ. 1800–1880) (18 ಕೀ. 2 ಉ. 1 ಸು.). ಈ ಪೀಳಿಗೆಯಲ್ಲಿ ಬಂದ ಮತ್ತೊಬ್ಬ ಪ್ರಮುಖ ಹರಿದಾಸರೆಂದರೆ ಅಸ್ಕಿಹಾಳದ **ಸಿರಿ/ಶಿರಿಗೋವಿಂದವಿಠಲ**ರು (ಕ್ರಿ.ಶ. 1891–919) (2 ಲಾವಣಿಗಳು ಸೇರಿದಂತೆ 35 ಕೀ. 1 ಬಯಲಾಟ).

3)(2) ಗೋಪಾಲದಾಸರ ತಮ್ಮಂದಿರಲ್ಲೊಬ್ಬರಾದ ಉತ್ತನೂರಿನ **ವರದಗೋಪಾಲವಿಠಲ**ರು (33ಕಿ. 27 ಉ. 30ಸು.).

3)(3) ಗೋಪಾಲದಾಸರ ತಮ್ಮಂದಿರಲ್ಲೊಬ್ಬರಾದ ಉತ್ತನೂರಿನ **ತಂದೆಗೋಪಾಲವಿಠಲ**ರು (19 ಕೀ.).



ಮಗನಾದ **ಗುರುತಂದೆಗೋಪಾಲವಿಠಲ**ರು, (27 ಉ.).



ಕೋಶಿಗಿಯ **ಗುರುಜಗನ್ನಾಥವಿಠಲ**ರು (ಕ್ರಿ.ಶ.1837–1918) (162 ಕೀ. 18 ಉ. 2 ಸು. 6 ದೀ.ಕೃ.; ಅವುಗಳಲ್ಲಿ 68 ಕೀರ್ತನೆಗಳು ಶ್ರೀ ರಾಘವೇಂದ್ರಸ್ವಾಮಿಗಳನ್ನು ಕುರಿತಾಗಿವೆ).



ಸಂತೆಕೆಲ್ಲೂರಿನ **ವರದೇಶವಿಠಲ**ರು (ಕ್ರಿ.ಶ. 1885–1918) (37 ಕೀ. 2 ಉ.) ಮತ್ತು ಲಿಂಗಸುಗೂರಿನ **ವರದೇಂದ್ರವಿಠಲ**ರು (ಕ್ರಿ.ಶ. 1886–1960) (30 ಕೀ.).

# ಅನುಬಂಧ 3

## ಗೋಪಾಲದಾಸರು



## ಜಗನ್ನಾಥದಾಸರು

3)(4) **ಜಗನ್ನಾಥದಾಸರು**. ಇವರು ಕ್ರಿ.ಶ. 1728ರಲ್ಲಿ ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಬ್ಯಾಗವಟ್ಟದಲ್ಲಿ ಜನಿಸಿದರು. ಇವರ ಜನ್ಮ ನಾಮ ಶ್ರೀನಿವಾಸ. ತಮಗೆ ಬಂದ ವಿಚಿತ್ರ ಖಾಯಿಲೆಯಿಂದ ಬಳಲಿ, ಪರಿಹಾರಕ್ಕಾಗಿ ವಿಜಯದಾಸರನ್ನು ಆಶ್ರಯಿಸಿದಾಗ, ಇವರು ಅಲ್ಪಾಯುಗಳು ಮತ್ತು ಇವರಿಂದ ಮುಂದೆ ಒಂದು ಮೇರುಕೃತಿ ರಚನೆಯಾಗಬೇಕಾದುದನ್ನು ವಿಜಯದಾಸರು ಅಪರೋಕ್ಷಜ್ಞಾನದಿಂದ ತಿಳಿದುಕೊಂಡು ಅವರನ್ನು ಗೋಪಾಲದಾಸರ ಬಳಿಗೆ ಕಳುಹಿಸುತ್ತಾರೆ ಮತ್ತು ಗೋಪಾಲದಾಸರಿಂದ ಅವರಿಗೆ ನಲವತ್ತು ವರ್ಷಗಳ ಆಯುರ್ದಾನ ಮಾಡಿಸುತ್ತಾರೆ. ಗೋಪಾಲದಾಸರ ಸಲಹೆಯಂತೆ ಜಗನ್ನಾಥದಾಸರು ಪಂಢರಾಪುರಕ್ಕೆ ಹೋಗಿ ಅಲ್ಲಿಯ ಚಂದ್ರಭಾಗಾ ನದಿಯಲ್ಲಿ ಸ್ನಾನಮಾಡುವಾಗ **'ಜಗನ್ನಾಥವಿಠಲ'** ಎಂದು ದೇವನಾಗರೀ ಅಕ್ಷರಗಳಲ್ಲಿ ಕೆತ್ತಿದ್ದ ಶಿಲಾಫಲಕವೊಂದು ಅವರ ಕೈಗೆ ಸಿಕ್ಕಿ ಅದರಿಂದ **"ಜಗನ್ನಾಥವಿಠಲ"** ಎಂಬ ಅಂಕಿತವನ್ನು ಸ್ವೀಕರಿಸಿರುತ್ತಾರೆಂದು ಹೇಳಲಾಗಿದೆ. ಕನ್ನಡದಲ್ಲಿ ಮಧ್ವಶಾಸ್ತ್ರದ ಸಾರ ಗ್ರಂಥ ಎನಿಸಿಕೊಂಡ "ಹರಿಕಥಾಮೃತಸಾರ"ವೆಂಬ ಮೇರುಕೃತಿ ರಚಿಸಿದ್ದಾರೆ. ಈ ಗ್ರಂಥದಲ್ಲಿ 32 ಸಂಧಿಗಳಿದ್ದು ಭಾಮಿನಿ ಷಟ್ಪದಿಯಲ್ಲಿ ಒಟ್ಟು 988 ಷಟ್ಪದಿ ಪದ್ಯಗಳಿವೆ. ಇದಲ್ಲದೆ ಇವರು ರಚಿಸಿದ 207 ಕೀರ್ತನೆಗಳು, 2 ಉಗಾಭೋಗಗಳು ಮತ್ತು 3 ಸುಳಾದಿಗಳು ದೊರೆತಿವೆ. ಜಗನ್ನಾಥದಾಸರು ಕ್ರಿ.ಶ. 1809ರಲ್ಲಿ ಮಾನ್ವಿಯಲ್ಲಿ ಕಾಲವಾದರು.



**3)(4)(1)** ಕರ್ಜಗಿಯ **ಶ್ರೀದವಿಠಲ**ರು (ಕ್ರಿ.ಶ. 1740–1820) (61 ಕೀ. 2 ಸು.). ಇವರು ಜಗನ್ನಾಥದಾಸರ "ಹರಿಕಥಾಮೃತಸಾರ"ಕ್ಕೆ ಫಲಶ್ರುತಿ ಬರೆದಿದ್ದಾರೆ.

**3)(4)(2)** ಲಿಂಗಸುಗೂರಿನ **ಪ್ರಾಣೇಶವಿಠಲ**ರು (ಕ್ರಿ.ಶ. 1736–1822) (258 ಕೀ. 18 ಉ. 3 ಸು. ಮತ್ತು 2 ವ್ಯ.ನಾ.).



ಪುತ್ರ **ಗುರುಪ್ರಾಣೇಶವಿಠಲರು** (ಕ್ರಿ.ಶ. 1785–1860) (18 ಕೀ.).



ಲಿಂಗಸುಗೂರಿನ **ಶ್ರೀಶಪ್ರಾಣೇಶವಿಠಲರು** (ಕ್ರಿ.ಶ. 1807/1815–1892) (20 ಕೀ.); ಇವರಿಗೆ ಅನೇಕ ಶಿಷ್ಯರಿದ್ದರೆಂದು ಹೇಳಲಾಗಿದೆ.

**3)(4)(3)** ಬುಡ್ಡಿಣ್ಣಿಯ **ಮನೋಹರವಿಠಲರು** (ಕಾಲವಾದದ್ದು ಕ್ರಿ.ಶ. ಸುಮಾರು 1825ರಲ್ಲಿ). ಇವರೂ ಜಗನ್ನಾಥದಾಸರ "ಹರಿಕಥಾಮೃತಸಾರ"ಕ್ಕೆ ಫಲಶ್ರುತಿ ಬರೆದಿದ್ದಾರೆ.

**3)(4)(4)** **ಶ್ರೀಶವಿಠಲರು**. ಹುಂಡೇಕಾರದಾಸರೆಂದೂ ಕಂಪ್ಲಿದಾಸರೆಂದೂ ಪರಿಚಿತರು.



ಕುಂಟೋಜಿ ನರಸಿಂಹದಾಸರೆಂದು ಪರಿಚಿತರಾದ **ಗುರುಶ್ರೀಶವಿಠಲರು** (ಕ್ರಿ.ಶ. 1740/1749–1846) (24ಕೀ. 6 ಉ. 7 ಸು.). ಭಜನಾ ಮಂಡಲಿಗಳು ಪ್ರಾರಂಭದಲ್ಲಿ ಹಾಡಿಕೊಳ್ಳುವ ಪ್ರಾರ್ಥನೆ "ಗುರು ಮಧ್ವರಾಯರಿಗೆ ನಮೋ" ಎಂಬ ಹಾಡನ್ನು ರಚಿಸಿರುವವರು ಇವರೇ; ಇವರೂ ಜಗನ್ನಾಥದಾಸರ "ಹರಿಕಥಾಮೃತಸಾರ"ಕ್ಕೆ ಫಲಶ್ರುತಿ ಬರೆದಿದ್ದಾರೆ.



**ಲಕ್ಷ್ಮೀಪತಿವಿಠಲಾಂಕಿತರು** (5 ಕೀ. 2 ಉ. 22 ಸು.).

ಶ್ರೀಶವಿಠಲರ ಮತ್ತೊಬ್ಬ ಶಿಷ್ಯರು ಸುರಪುರದ ಆನಂದದಾಸರೆಂದು ಪರಿಚಿತರಾದ **'ಕಮಲೇಶವಿಠಲರು'** (21 ಕೀ.). 'ಕಮಲೇಶಾಂಕಿತರು' ಇತ್ತೀಚಿನವರಾದ ಮಂತ್ರಾಲಯದ ಶ್ರೀ ರಾಜಾ ಗುರುರಾಜಾಚಾರ್ಯರು.

**3)(4)(5)** ಮಾನಾಮಧುರೀ ದಾಸರೆಂದು ಪರಿಚಿತರಾದ **ವೆಂಕಟವಿಠಲರು** (10 ಕೀ.).

**3)(4)(6)** ನಂಜನಗೂಡು **ಬಾದರಾಯಣವಿಠಲ**ರೆಂಬುವರು (ಕ್ರಿ.ಶ. ಸುಮಾರು 1775) ಜಗನ್ನಾಥದಾಸರ ನೇರವಾದ ಶಿಷ್ಯರೆಂದು, ಸ್ವಪ್ನಾಂಕಿತ ಶಿಷ್ಯರೆಂದು ಎರಡೂ ರೀತಿಯ ಹೇಳಿಕೆಗಳಿವೆ. ಇವರದೆಂದು ನಂಬಲಾದ 17 ಕೀ. 1 ವೃ.ನಾ. ದೊರೆತಿದೆ.

# ಅನುಬಂಧ 4

## ವಿಜಯದಾಸರು



## 4) ಮೋಹನದಾಸರು

**ಮೋಹನವಿಠಲ** (ಕ್ರಿ.ಶ. 1730–1815), ಇವರು ವಿಜಯದಾಸರ ಸಾಕು ಮಗ, ಹೆಸರು ಮೋಹನ. ಹುಟ್ಟೂರು ಆಂಧ್ರಪ್ರದೇಶದ ಚಿಪ್ಪಗಿರಿ, ಅಥವಾ ಕರ್ನಾಟಕದ ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಆನೆಗುಂದಿ ಮತ್ತು ವಾಸಸ್ಥಳ ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಚೀಕಲಪರವಿ, (56 ಕೀ. 2 ಉ. 3 ಸು. 1 ಕೋಲುಹಾಡು).



ಚಿಕ್ಕೇರಹಳ್ಳಿ ತ(ತಿ)ಮ್ಮಣ್ಣ ದಾಸರೆಂದು ಪರಿಚಿತರಾದ **ಮಧ್ವಪತಿ, ಮಧ್ವವರದವಿಠಲ**ರು (ಕ್ರಿ.ಶ. 1753–1833) (5 ಕೀ.).



ಕುಂಭಕೋಣದ **ಪ್ರಸನ್ನವೆಂಕಟವಿಠಲ**ರು (24 ಕೀ. 3 ಸು.)



ಮೈಸೂರಿನ ಕಟ್ಟಮನೆಯ **ವಿಜಯರಾಮಚಂದ್ರವಿಠಲ**ರು (ಕ್ರಿ.ಶ. 1819–72) (37 ಕೀ. 2 ಸು.).



ಮೈಸೂರಿನ ಕಟ್ಟಮನೆಯ **ಜಯೇಶವಿಠಲ**ರು (ಕ್ರಿ.ಶ. 1850–1932) (61 ಕೀ. 1 ಉ.)

**5) ವಿಜಯದಾಸರಿಂದ ಅಂಕಿತ ಪಡೆದ ಇತರರು :**

ಅವರಿಂದ ಸ್ವಪ್ನದಲ್ಲಿ ಅಂಕಿತ ಪಡೆದವರು ಮೊದಲಕಲ್ಲು ಅಥವಾ ಚನ್ನಪಲ್ಲಿ ಶೇಷದಾಸರೆಂದು ಪ್ರಸಿದ್ಧರಾದ **ಗುರುವಿಜಯವಿಠಲ**ರು (ಕ್ರಿ.ಶ. 1802–1855/1885); ಇವರ ಹುಟ್ಟೂರು ಮತ್ತು ವಾಸಸ್ಥಳ ಆಂಧ್ರಪ್ರದೇಶದ ಗದ್ವಾಲದಿಂದ 5 ಮೈಲಿ

ದೂರದಲ್ಲಿರುವ ಆದಿಶಿಲೆ ಅಥವಾ ಮೊದಲಕಲ್ಲು (5 ಕೀ. 13 ಉ. 44 ಸು.). ವಿಜಯದಾಸರಿಂದ ಅಥವಾ ವೇಣುಗೋಪಾಲವಿಠಲರಿಂದ ಅಂಕಿತ ಪಡೆದವರು **ರಾಮಚಂದ್ರವಿಠಲ**ರು (ಕ್ರಿ.ಶ. 17–18ನೆಯ ಶತಮಾನ) (2 ಕೀ. 1 ಉ. 5 ಸು.).

# ಅನುಬಂಧ 5

ಹಿಂದಿನ ಅನುಬಂಧಗಳಲ್ಲಿ ತಿಳಿಸಿರುವ ಪೀಳಿಗೆಗಳಲ್ಲಿ ಬಂದು ಹೋದ ಹರಿದಾಸರಲ್ಲದೆ ಬಂದ ಇತರ ಪ್ರಸಿದ್ಧ ಹರಿದಾಸರೆಂದರೆ :

ಗೋಕಾವಿ ಅನಂತಾದ್ರೀಶರೆಂದು ಪರಿಚಿತಿರಾದ **ಅನಂತಾದ್ರೀಶಾಂಕಿತರು** (ಕ್ರಿ.ಶ. 1776–1840) (7 ಕೀ. 6 ದೀ.ಕೃ.); ಇಸ್ಲಾಂ ಧರ್ಮಕ್ಕೆ ಸೇರಿದ ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಜೋಳದಹೆಡಿಗೆಯ ಬಡೇಸಾಹೇಬರು (ಕ್ರಿ.ಶ. 1798–1828). ಇವರು ಜೀವನದಲ್ಲಿ ಜುಗುಪ್ಸೆ ಹೊಂದು ಆತ್ಮಹತ್ಯೆ ಮಾಡಿಕೊಳ್ಳಲು ಹಂಪಿಯ ಚಕ್ರತೀರ್ಥಕ್ಕೆ ಹಾರಿದಾಗ ಕೇಳಿದ ಮಂಗಳ ಧ್ವನಿಯಿಂದ **ಶ್ರೀರಾಮ** ಎಂಬ ಅಂಕಿತ ಪ್ರಾಪ್ತಿಯಾಗಿ ಮುಂದೆ ಹರಿದಾಸರಾದರು (676 ಕೀ. 95 ಉ. 6 ದೀ.ಕೃ.); ಸುರಪುರ ತಾಲ್ಲೂಕಿನ **ಹೆನ್ನೆ/ಹೆನ್ನೆರಂಗ/ಹೊನ್ನವಿಠಲಾಂ**ಕಿತರಾದ ಹೊನ್ನಪ್ಪದಾಸರು. ಇವರು ರಚಿಸಿದ 189 ಕೀರ್ತನೆಗಳು ದೊರೆತಿವೆಯಾದರೂ ಹೆಚ್ಚಿನವು ಅಪೂರ್ಣವಾಗಿವೆ.

**ಮುಂದೆ 19–20ನೆಯ ಶತಮಾನದಲ್ಲಿ ಬಂದ ಹರಿದಾಸರಲ್ಲಿ ಪ್ರಮುಖರಾದವರು:** ಬಾಗೇಪಲ್ಲಿ ಸುಬ್ಬರಾಯದಾಸರೆಂದು ಪರಿಚಿತರಾದ **'ಗುರುರಾಮವಿಠಲರು'** (ಕ್ರಿ.ಶ. 1850–1915), ಇವರು ಹುಟ್ಟು ಕುರುಡರು (337 ಕೀ. 7 ದೀ.ಕೃ.); ಬಲ್ಲಟಗಿ ಗುಂಡಾಚಾರ್ಯರೆಂದು ಪರಿಚಿತರಾದ ಮಾನ್ವಿಯ **'ಶಾಮಸುಂದರವಿಠಲರು'** (ಕ್ರಿ.ಶ. 1896–1956) (247 ಕೀ. 2 ಉ. 4 ಸು. 1 ಕೋಲುಪದ ಮತ್ತು ಕೀರ್ತನೆಯ ರೂಪದಲ್ಲಿ ಶ್ರೀ ಸತ್ಯನಾರಾಯಣ ಕಥೆ); ತಿರುಪತಿಯ **'ಇಂದಿರೇಶಾಂಕಿತ'**ರಾದ ಪಾಂಡುರಂಗಿ ಹುಚ್ಚಾಚಾರ್ಯರು (ಕ್ರಿ.ಶ.1895–1939) (165 ಕೀ. 7 ದೀ.ಕೃ); ಕೊಪ್ಪರದ **'ಕಾರ್ಪರ ನರಹರಿ'** ಅಂಕಿತರಾದ ನರಹರಿದಾಸರು (ಕ್ರಿ.ಶ.1896–1979) (119 ಕೀ.). **'ಗದುಗಿನವೀರನಾರಾಯಣಾ'**ಂಕಿತರಾದ ಹುಯಿಲಗೋಳ ನಾರಾಯಣರಾಯರು (87ಕೀ.). ಗೋಪಾಲದಾಸರಿಂದ ಸ್ವಪ್ನಾಂಕಿತರಾದ ಕಳಸದ ಪ್ರಹ್ಲಾದ ಗೌಡರೆಂದು ಪರಿಚಿತರಾದ **'ತಂದೆವರದಗೋಪಾಲವಿಠಲರು'** (76 ಕೀ. 1 ಉ. 14 ಸು.); ಗಲಗಲಿಯ **'ಭೂಪತಿವಿಠಲಾಂಕಿತರು'** (ಕ್ರಿ.ಶ. 1896–1988) (50 ಕೀ. 1 ಖಂಡಕಾವ್ಯ); ಕಡಕೊಳದ **'ರಾಜಗೋಪಾಲಾಂಕಿತರು'** (3 ಕೀ. 34 ದೀ.ಕೃ.).

**ಇದೇ ಶತಮಾನದಲ್ಲಿ ಬಂದ ಇತರ ಪ್ರಮುಖ ಹರಿದಾಸರು** ಬೆಂಗಳೂರಿನ **'ಕರಿಗಿರೀಶಾಂಕಿತ'**ರಾದ ವರವಣಿ ರಾಮರಾಯರು (ಕ್ರಿ.ಶ.1899–1954) (91ಕೀ. 6 ಉ.).

ಇವರು ಹರಿದಾಸ ಸಾಹಿತ್ಯದ ಸಂಗ್ರಹಣೆ, ಸಂಪಾದನೆ ಮತ್ತು ಪ್ರಕಟನೆಗಳಿಗಾಗಿ ದುಡಿದವರು; **'ರಘುರಾಮವಿಠಲಾಂಕಿತರಾದ'** (ಕ್ರಿ.ಶ. 1890–1970) ಸುಬೋಧ ರಾಮರಾಯರು. ಇವರು ರಚಿಸಿದ 15 ಕೀರ್ತನೆಗಳು ದೊರೆತಿವೆ. ಇವಲ್ಲದೇ ಇನ್ನೂ 36 ಕೀರ್ತನೆಗಳು ಅವರ ವಂಶಸ್ಥರಲ್ಲಿದೆಯೆಂದು ತಿಳಿದು ಬಂದಿದೆ. ಇವರು ಹರಿದಾಸ ಸಾಹಿತ್ಯ ಪ್ರಚಾರಕ್ಕಾಗಿ ದುಡಿದವರು; ಬೆಂಗಳೂರಿನ **'ಶ್ರೀಕರ, ಶ್ರೀಕಾಂತಾಂಕಿತರಾದ'** ದಾಸರ ಲಕ್ಷ್ಮೀನಾರಣಪ್ಪನವರು (ಕ್ರಿ.ಶ.1880–1940) (76 ಕೀ. 5 ಉ.). ಇವರು ಹರಿದಾಸ ಸಾಹಿತ್ಯದ ಸಂಗ್ರಹಣೆ, ಸಂಪಾದನೆ ಮತ್ತು ಪ್ರಕಟನೆಗಳಿಗಾಗಿ ದುಡಿದವರು;

ಸ್ವಪ್ನದಲ್ಲಿ ಗೋಪಾಲದಾಸರಿಂದ ಅಂಕಿತವನ್ನು ಪಡೆದ ಬೆಂಗಳೂರಿನ **'ಪ್ರಸನ್ನಶ್ರೀನಿವಾಸಾ'**ಂಕಿತರಾದ, ಪುರುಷೋತ್ತಮರಾಯರು (ಕ್ರಿ.ಶ. ಸು 1900–90) (163 ಕೀ. 10 ದೀ.ಕೃ. ಅಲ್ಲದೇ ಶ್ರೀ ವಿಷ್ಣುಸಹಸ್ರನಾಮದ ಒಂದೊಂದೂ ನಾಮದ ಅರ್ಥವನ್ನು ಕನ್ನಡದಲ್ಲಿ ಪದ್ಯರೂಪದಲ್ಲಿ ರಚಿಸಿದ್ದಾರೆ).

**ಇವರಲ್ಲದೆ ಪ್ರಮುಖರಾದ ಇನ್ನಿತರರೆಂದರೆ,** ಚಿಕ್ಕೋಡಿ ಆಚಾರ್ಯರೆಂದು ಪರಿಚಿತರಾದ **'ಸಿರಿ(ಶಿರಿ)(ಶ್ರೀ)ವತ್ಸಾಂಕಿತರು'** (26 ಕೀ.); ಕೋಲಾರದ **'ಸಿರಿವಿಠಲಾಂಕಿತರಾದ'** ಕಲಮದಾನಿ ನಾರಾಯಣರಾಯರು (ಕ್ರಿ.ಶ. 1882–1963) (4 ಕೀ. 2 ದೀ.ಕೃ.). ಇವರು ಅನೇಕ ಕಡೆ ತಿರುಗಾಡಿ ಹರಿದಾಸರ ಬಗ್ಗೆ ಮಾಹಿತಿಯನ್ನು ಕಲೆ ಹಾಕಿದವರು; ಲಿಂಗಸುಗೂರಿನ **'ಸುಂದರವಿಠಲಾಂಕಿತರಾದ'** ಗೋರೆಬಾಳ ಹನುಮಂತರಾಯರು (ಕ್ರಿ.ಶ.1893–1969), (5 ಕೀ. 1 ಸು. 5 ದೀ.ಕೃ.). ಇವರು ನೂರಾರು ಹರಿದಾಸರ ಕೃತಿಗಳನ್ನು ಸಂಗ್ರಹಿಸಿ, ಸಂಶೋಧಿಸಿ, ಪ್ರಕಟಿಸಿ ಮನೆಮನೆಗೆ ತಲುಪಿಸಿದ್ದಾರೆ; ಹಾವೇರಿಯ **'ಹನುಮೇಶವಿಠಲಾಂಕಿತರಾದ'** ಹನುಮಂತ ರಂಗರಾವ್ ಬುರ್ಲಿ (ಕ್ರಿ.ಶ. 1854–1941) (75 ಕೀ.); ರಂಗವಲಿದ ಚಿಕ್ಕದಾಸರೆಂದು ಮಾನ್ಯರಾದ **'ತಂದೆಪುರಂದರವಿಠಲಾಂಕಿರಾದ'** ಕುಂಭಕೋಣದ ಶಾಮರಾಯರು (ರಾಘವೇಂದ್ರಸ್ವಾಮಿಗಳನ್ನು ಕುರಿತ 4 ಕೀ.).

**20ನೆಯ ಶತಮಾನದಲ್ಲಿ ಬಂದ ಪ್ರಸಿದ್ಧ ಹರಿದಾಸರೆಂದರೆ :** ಚಿತ್ರದುರ್ಗದ **'ತಂದೆವೆಂಕಟೇಶವಿಠಲರು'** (ಕ್ರಿ.ಶ. 1907–82); ಇವರು ರಚಿಸಿದ 300ಕ್ಕೂ ಹೆಚ್ಚು ಕೃತಿಗಳು ದೊರೆತಿವೆ. ಇವುಗಳಲ್ಲಿ 1 ಸುಳಾದಿ, 1 ಉಗಾಭೋಗ, ಧ್ಯಾನಶ್ಲೋಕಗಳು, ಷಟ್ಪದಿಗಳು, ಶೀಶಪದ, ಖಡಕು, ಅಶ್ವಧಾಟಿ, ದಂಡಕ ಇತ್ಯಾದಿ ಅನೇಕ ಕಾವ್ಯಪ್ರಕಾರಗಳೂ ಸೇರಿವೆ; ಲಿಂಗಸುಗೂರಿನ **'ಅಭಿನವಪ್ರಾಣೇಶವಿಠಲರು'** (ಕ್ರಿ.ಶ. 1903–1978) (9 ಕೀ. 22 ಸು.); ಶ್ಯಾಮಸುಂದರವಿಠಲರಿಂದ ಸ್ವಪ್ನಾಂಕಿತರಾದ, ಗಿಲೆಸುಗೂರಿನ **'ಗುರುಶ್ಯಾಮಸುಂದರವಿಠಲರು'** (ಕ್ರಿ.ಶ. 1932–87) (141 ಕೀ. 1 ಉ.).

# ಮಹಿಳಾ ಹರಿದಾಸರು

ಕರ್ನಾಟಕ ಹರಿದಾಸ ಪರಂಪರೆಯಲ್ಲಿ ಅನೇಕ ಮಹಿಳಾ ಹರಿದಾಸರು ಆಗಿಹೋಗಿದ್ದಾರೆ. ಇವರಲ್ಲಿ ಪ್ರಮುಖರಾದವರು :

1) ಬಾಗಲಕೋಟೆ ಬೀಳಗಿ ತಾಲ್ಲೂಕಿನ **'ರಾಮೇಶ ಮತ್ತು ರಮಿಅರಸು'** ಅಂಕಿತಸ್ಥರಾದ ಗಲಗಲಿ ಅವ್ವನವರು (ಕ್ರಿ.ಶ. 1670–1760). ಮಹಿಳಾ ಹರಿದಾಸರಲ್ಲಿ ಬಹುಶಃ ಇವರೇ ಮೊದಲನೆಯವರು. ಇವರ ಹುಟ್ಟು ಹೆಸರು ರಮಾ; ಇವರಿಗೆ ಮದುವೆಯಾದಾಗ ವಯಸ್ಸು ಹನ್ನೆರಡು, ಗಂಡ ತೊಂಬತ್ತು ವಯಸ್ಸಿನ ಮುದ್ಗಲಾಚಾರ್ಯರು. ವಿವಾಹವಾದ ಎಂಟು ದಿನಗಳೊಳಗೆ ವಿಧವೆಯಾದರು. ಮುದ್ಗಲಾಚಾರ್ಯರ ಮೊದಲನೆಯ ಹೆಂಡತಿಯ ಗಂಡು ಮಕ್ಕಳು ತಮಗಿಂತ ದೊಡ್ಡವರಾದರೂ ಸಹ, ಅವರಿಗೆ ಸಾಕು ತಾಯಿಯಾಗಿ, ಪಂಡಿತರಾದ ಆ ಮಕ್ಕಳಿಂದಲೇ ಶಾಸ್ತ್ರಪಾಠ ಕಲಿತು ಹರಿದಾಸರಾದರು (264 ಕೀ.).

2) ದಾವಣಗೆರೆ ಜಿಲ್ಲೆ ಹರಪನಹಳ್ಳಿಯ ಭೀಮವ್ವನವರು (ಕ್ರಿ.ಶ. 1823–1903). ಇವರ ಹುಟ್ಟು ಹೆಸರು ಕಮಲಾಕ್ಷಿ. ಹನ್ನೊಂದನೆಯ ವಯಸ್ಸಿಗೆ ನಲವತ್ತೈದು ವಯಸ್ಸಿನ ವ್ಯಕ್ತಿಗೆ ಮೂರನೆಯ ಹೆಂಡತಿಯಾಗಿ ಇಪ್ಪತ್ತೈದು ವರ್ಷದ ನಂತರ ವಿಧವೆಯಾದರು. ಮುಂದೆ ಸ್ವಪ್ನದಲ್ಲಿ ನಾರದರೆಂದು ಭಾವಿಸಿದ ಒಬ್ಬ ಬ್ರಾಹ್ಮಣರಿಂದ **'ಭೀಮೇಶಕೃಷ್ಣ'** ಎಂಬ ಅಂಕಿತ ಪಡೆದು ಹರಿದಾಸರಾದರು (143 ಕೀ. 6 ದೀ.ಕೃ.).

3) ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕು ಮಲೆಬೆನ್ನೂರಿನ ಬಳಿ ಇರುವ ಕೊಮರನ ಹಳ್ಳಿಯ **'ಹೆಳವನಕಟ್ಟೆರಂಗ, ಹೆಳವನಕಟ್ಟೆವೆಂಕಟ'** ವೆಂಬ ಅಂಕಿತಸ್ಥರಾದ ಹೆಳವನಕಟ್ಟೆ ಗಿರಿಯಮ್ಮನವರು (ಕ್ರಿ.ಶ. 17–18ಮೆ ಶತಮಾನ). ಇವರು ಹತ್ತು–ಹನ್ನೆರಡನೆ ವಯಸ್ಸಿನಲ್ಲಿಯೇ ಮದುವೆಯಾದರೂ ಸಹ, ಸಂನ್ಯಾಸಿನಿಯಂತೆ ಜೀವನ ಮಾಡಲು ನಿಶ್ಚಯಿಸಿ, ಗಂಡನಿಗೆ ಮತ್ತೊಂದು ಮದುವೆಯಾಗಲು ಒಪ್ಪಿಸಿ, ದೇವರ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು (53 ಕೀ. 6 ದೀ.ಕೃ.).

4) ಸಂಡೂರಿನ **'ನರಸಿಂಹವಿಠಲಾಂಕಿತ'** ಓರಬಾ(ವಾ)ಯಿ ಲಕ್ಷ್ಮೀದೇವಮ್ಮನವರು (ಕ್ರಿ.ಶ.1865–1950) (21 ಕೀ. 11 ದೀ.ಕೃ.); ಬೆಂಗಳೂರಿನ **'ಕಮಲನಾಭವಿಠಲಾಂಕಿತ'** ನಿಡಗುರುಕಿ ಜೀವೂಬಾಯಿಯವರು (ಕ್ರಿ.ಶ. 1897–1983) (170 ಕೀ. 10 ದೀ.ಕೃ.); ಬಳ್ಳಾರಿ ಜಿಲ್ಲೆ ಹೊಸಪೇಟೆಯ **'ರುಕ್ಮಿಣಿಕೃಷ್ಣಾಂಕಿತರಾದ'** ರುಕ್ಮಿಣಿಬಾಯಿ ರೊಟ್ಟಿಯವರು (ಕ್ರಿ.ಶ. 1938–92).

5) **ತಂದೆಮುದ್ದುಮೋಹನವಿಠಲರ ಮಹಿಳಾ ಶಿಷ್ಯರಲ್ಲಿ ಪ್ರಮುಖರಾದವರು** ಚಿತ್ರದುರ್ಗದ **'ಗೋಪಾಲಕೃಷ್ಣವಿಠಲಾಂಕಿತರಾದ'** ಅಂಬಾಬಾಯಿಯವರು (ಕ್ರಿ.ಶ.

1902–1945) (245 ಕೀ. 14 ಉ. 2 ಸು. 2 ವೃ.ನಾ. 4 ದೀ.ಕೃ.); ಗೌಡಗೆರೆಯ **'ರಮಾವಲ್ಲಭವಿಠಲಾಂಕಿತರಾದ'** ಸರಸಾಬಾಯಿಯವರು (ಕ್ರಿ.ಶ. 1882–1984) (13 ಕೀ.); ಚಿತ್ರದುರ್ಗದ **'ರುಕ್ಮಿಣೀಶವಿಠಲಾಂಕಿತರಾದ'** ಗುಂಡಮ್ಮನವರು (ಕ್ರಿ.ಶ. ಸುಮಾರು 1900) (7 ಕೀ.).

6) ಬಳ್ಳಾರಿಯ **'ವೆಂಕಟವಿಠಲ ಮತ್ತು ಶ್ರೀರಾಘವೇಂದ್ರಾಂಕಿತರಾದ'** ರಾಧಾಬಾಯಿಯವರು (ಕ್ರಿ.ಶ. 1889–1976) (35 ಕೀ.); ಕೊಪ್ಪದ **'ಶಾಂತಿ'** ಎಂಬುವ ಅಂಕಿತಸ್ಥರಾದ ನಾಡಿಗರ ಶಾಂತಿಬಾಯಿಯವರು (ಕ್ರಿ.ಶ.1860–1901) (27 ಕೀ.); ನೆಲಮಂಗಲದ **'ಶ್ರೀಶ್ರೀನಿವಾಸಾಂಕಿತರಾದ'** ಸರಸ್ವತಿ(ತುಳಸಿ) ಬಾಯಿಯವರು (ಕ್ರಿ.ಶ. ಸುಮಾರು 1900–1982) (144 ಕೀ. 4 ಉ. 2 ಸು. 5 ದೀ.ಕೃ.); ಕೋಲಾರದ **'ನಾಗೇಶಶಯನಾಂಕಿತರಾದ'** ಪದ್ಮಾಬಾಯಿ ಕೋಲಾರ್ ಅವರು (ಕ್ರಿ.ಶ. 1912–92) (ಶ್ರೀ ರಾಘವೇಂದ್ರಸ್ವಾಮಿಗಳನ್ನು ಕುರಿತ 4 ಕೀ. 1 ಸ್ತೋತ್ರಪದ); ಕಳಸದ ಗೌಡರ ಮನೆತನದ **'ಕಾಳಿಮರ್ದನಕೃಷ್ಣಾಂಕಿತರಾದ'** ಸುಂದರಮ್ಮನವರು (ಕ್ರಿ.ಶ. 20ನೆ ಶತಮಾನ) (30 ಕೀ.).

**ಹರಿದಾಸ ಸಾಹಿತ್ಯದ ಬೆಳವಣಿಗೆಗೆ ಅನೇಕ ಯತಿಗಳು ಕಾರಣಕರ್ತರಾಗಿದ್ದಾರೆ.** ಶ್ರೀ ನರಹರಿತೀರ್ಥರು, ಶ್ರೀ ಶ್ರೀಪಾದರಾಜರು, ಶ್ರೀ ವ್ಯಾಸರಾಜರು ಮತ್ತು ಶ್ರೀ ರಾಘವೇಂದ್ರಸ್ವಾಮಿಗಳಲ್ಲದೆ, ಹರಿದಾಸ ಸಾಹಿತ್ಯದ ಬೆಳವಣಿಗೆಗೆ ಕಾರಣಕರ್ತರಾದ ಇತರ ಯತಿಗಳೆಂದರೆ :

1) ನಂಜನಗೂಡು ಮಠದ **'ವಿಜಯೀಂದ್ರರಾಮಾಂಕಿತರಾದ'** ಶ್ರೀ ವಿಜಯೀಂದ್ರತೀರ್ಥರು (ಆಶ್ರಮ ಕಾಲ ಕ್ರಿ.ಶ. 1575–1614). ಇವರು ಶ್ರೀ ರಾಘವೇಂದ್ರತೀರ್ಥರ ಪರಮ ಗುರುಗಳು (2 ಕೀ. 1 ಉ. 2 ಸು.).

2) ಸೋಸಲೆ ಶ್ರೀ ವ್ಯಾಸರಾಜ ಮಠದ **'ವಿದ್ಯಾಕಾಂತಾಂಕಿತರಾದ'** ಶ್ರೀ ವಿದ್ಯಾಕಾಂತತೀರ್ಥರು (ಆಶ್ರಮ ಕಾಲ ಕ್ರಿ.ಶ. 1812–24) (1 ಕೀ.); **'ನಾಮಗಿರೀಶಾಂಕಿತರಾದ'** ಶ್ರೀ ವಿದ್ಯಾರತ್ನಾಕರತೀರ್ಥರು (ಆಶ್ರಮ ಕಾಲ ಕ್ರಿ.ಶ. 1903–15) (23 ಕೀ.) ಮತ್ತು **'ಪ್ರಸನ್ನಾಂಕಿತದರಾದ'** ಶ್ರೀ ವಿದ್ಯಾಪ್ರಸನ್ನತೀರ್ಥರು (ಆಶ್ರಮ ಕಾಲ ಕ್ರಿ.ಶ. 1940–69) (241 ಕೀ. 4 ಉ.).

3) ಕುಂದಾಪುರ ಶ್ರೀ ವ್ಯಾಸರಾಜ ಮಠದ **'ಲಕ್ಷ್ಮೀಶಾಂಕಿತರಾದ'** ಶ್ರೀ ಲಕ್ಷ್ಮೀಶತೀರ್ಥರು (ಆಶ್ರಮ ಕಾಲ ಕ್ರಿ.ಶ. 1938–89) (2 ಕೀ.).

4) ಸೋದೆ ಶ್ರೀ ವಾದಿರಾಜ ಮಠದ **'ರಾಜೇಶ, ರಾಜನಾಥ ಹಯಮುಖ, ಹಯಾಸ್ಯಾಂಕಿತರಾದ'** ಶ್ರೀ ವಿಶ್ವೇಂದ್ರತೀರ್ಥರು (ಆಶ್ರಮ ಕಾಲ ಕ್ರಿ.ಶ. 1881–1943) (45 ಕೀ.).

5) ಪಲಿಮಾರು ಮಠದ **'ರಘುತಿಲಕಾಂಕಿತರಾದ'** ಶ್ರೀ ರಘುವರ್ಯತೀರ್ಥರು (ಆಶ್ರಮ ಕಾಲ ಕ್ರಿ.ಶ. 1669–1714) (2 ಕೀ.).

6) ಶ್ರೀ ರಾಘವೇಂದ್ರಸ್ವಾಮಿಗಳ ಮಠದ **'ವಾದೀಂದ್ರಾಂಕಿತರಾದ'** ಶ್ರೀ ವಾದೀಂದ್ರತೀರ್ಥರು (ಆಶ್ರಮ ಕಾಲ ಕ್ರಿ.ಶ. 1728–50) (2 ಕೀ.) ಮತ್ತು **'ವರದೇಂದ್ರಯತಿ'** ಎಂಬ ಅಂಕಿತಸ್ಥರಾದ ಶ್ರೀ ವರದೇಂದ್ರತೀರ್ಥರು (ಆಶ್ರಮ ಕಾಲ 1761–85). ಇವರು ಅನೇಕ ಹರಿದಾಸರಿಗೆ ಗುರುಗಳೂ, ಆಶ್ರಯದಾತರೂ ಆಗಿದ್ದರೆಂದು ಹೇಳಲಾಗಿದೆ.

7) ಬಿಡಿ ಸಂನ್ಯಾಸಿಗಳಾದ **'ವಾಸುದೇವವಿಠಲಾಂಕಿತರಾದ'** ಶ್ರೀ ವ್ಯಾಸತತ್ತ್ವಜ್ಞತೀರ್ಥರು (ಕ್ರಿ.ಶ. 1704–1800) (66 ಕೀ. 9 ಉ. 13 ಸು.).

8) ಮೈಸೂರಿನ ಬಳಿಯ ಸಾಗರಕಟ್ಟೆ ಮಠದ **'ನರಹರಿಯಾಂಕಿತರಾದ'** ಶ್ರೀ ಪ್ರದ್ಯುಮ್ನತೀರ್ಥರು (ಕ್ರಿ.ಶ. 1890–1975) (44 ಕೀ.).

**ಕ್ರಿ.ಶ. 20ನೆಯ ಶತಮಾನದಲ್ಲಿಯೂ ಹಲವಾರು ಮಹನೀಯರು ಮತ್ತು ಮಹಿಳೆಯರು ಅಂಕಿತ ಪಡೆದು ಕೀರ್ತನೆಗಳನ್ನು ರಚಿಸಿದ್ದಾರೆ ಮತ್ತು ಪ್ರಸ್ತುತ ಶತಮಾನದಲ್ಲಿಯೂ ಅದು ಮುಂದುವರಿಯುತ್ತಿದೆ.**

**ವಿಷಯ ಸೂಚಿ** : ಕ್ರಿ.ಶ. 21ನೆಯ ಶತಮಾನಕ್ಕೆ ಮೊದಲು ದೈವಾಧೀನರಾದ 372 ಜನ ಹರಿದಾಸರ ಸಂಕ್ಷಿಪ್ತ ಜೀವನ ಪರಿಚಯ ಲಭ್ಯವಿದೆ[21].



# 11. ಗ್ರಂಥ ಋಣ


1 ಕರ್ನಾಟಕ ಭಕ್ತ ವಿಜಯ, ಬೇಲೂರು ಕೇಶವದಾಸರು, ನವಭಾರತ್ ಪ್ರಕಾಶನ, ಮೈಸೂರು, 2004

2 ಹರಿದಾಸ ಸಾಹಿತ್ಯ ಸಾರ, ಡಾ. ಜಿ. ವರದರಾಜರಾವ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1987

3 ದಾಸಸಾಹಿತ್ಯಾಧ್ಯಯನಕ್ಕೊಂದು ಪಾಠಕ್ರಮ, ಶ್ರೀ ಎ.ಎನ್. ಅನಂತಸ್ವಾಮಿರಾವ್, ಹರಿದಾಸ ಸಾಹಿತ್ಯ ಮಾಹಿತಿ ಕೇಂದ್ರ ಟ್ರಸ್ಟ್, ಬೆಂಗಳೂರು, 2016

4 ಮನುಕುಲಕ್ಕೆ ಹರಿದಾಸರ ಕೊಡುಗೆ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಜಯಂತ್ ಬುಕ್ ಏಜೆನ್ಸಿ, ಬೆಂಗಳೂರು, 2010

5 ಕನಕದಾಸರ ಕೀರ್ತನೆಗಳು, ಡಾ. ಶ್ರೀಮತಿ ಟಿ.ಎನ್. ನಾಗರತ್ನ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 2014

6 ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ, ಡಾ. ಅನಂತಪದ್ಮನಾಭರಾವ್, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, 2002

7 ಹರಿದಾಸ ಸಾಹಿತ್ಯ ಪ್ರಕಾರಗಳು, ಡಾ. ವಾಣಿಶ್ರೀ ಗಿರೀಶ್ ಅವರ ಲೇಖನ

8 ಶ್ರೀ ಹಯವದನಾಂಕಿತ ಗಾನಸುಧಾ, ಶ್ರೀ ವಾದಿರಾಜರ ಆಯ್ದ ಕೀರ್ತನೆಗಳು, ನಾವೆಲ್ಪಿ ಜಿ. ವೆಂಕಟೇಶ್, ಶ್ರೀ ರಾಘವೇಂದ್ರ ದರ್ಶನ ಕೇಂದ್ರ, ಬೆಂಗಳೂರು, 2013

9 dasasahithyamahithi.com ಎಂಬ ವೆಬ್ ಸೈಟ್

10 ಶ್ರೀ ಶ್ರೀಪಾದರಾಜರ ಕೃತಿಗಳು, ಡಾ. ಜಿ. ವರದರಾಜರಾವ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1987

11 ಹರಿದಾಸರ ಭಕ್ತಿ ಸ್ವರೂಪ, ಡಾ. ಶ್ರೀಮತಿ ಟಿ.ಎನ್. ನಾಗರತ್ನ, ಶ್ರೀ ಸುಶಮೀಂದ್ರ ಸೇವಾ ಪ್ರತಿಷ್ಠಾನ, ನಂಜನಗೂಡು, 2010

12 ದಾಸ ಸಾಹಿತ್ಯ ಕೋಶ, ನಾವೆಲ್ಪಿ ಜಿ. ವೆಂಕಟೇಶ್, ಶ್ರೀ ರಾಘವೇಂದ್ರ ದರ್ಶನ ಕೇಂದ್ರ, ಬೆಂಗಳೂರು, ಮೊದಲನೆಯ ಮುದ್ರಣ 2010 – ಈ ಗ್ರಂಥಕ್ಕೆ ಶ್ರೀಗಳು ನೀಡಿದ ಆಶೀರ್ವಚನ

13 dasasahithyamahithi.com ಎಂಬ ವೆಬ್ ಸೈಟಿನ ಮಾಸಪತ್ರಿಕೆಗೆ ವಿದ್ವಾನ್ ಸಿ. ಎಚ್. ಬದರೀನಾಥಾಚಾರ್ಯರು ಬರೆದುಕೊಟ್ಟ ಆಶೀರ್ವಾದಪೂರ್ವಕ ಸಂದೇಶ

14 ದಾಸ ಸಾಹಿತ್ಯ ಸೌರಭ, ಡಾ. ಟಿ.ಎನ್. ನಾಗರತ್ನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, 2007

15 ದಾಸ ಸಾಹಿತ್ಯ ಕೋಶ, ದಾಸರುಗಳ ಸಂಕ್ಷಿಪ್ತ ಜೀವನ ಪರಿಚಯ, ನಾವೆಲ್ಪಿ ಜಿ. ವೆಂಕಟೇಶ್, ಶ್ರೀ ರಾಘವೇಂದ್ರ ದರ್ಶನ ಕೇಂದ್ರ, ಬೆಂಗಳೂರು, 2018

16 Music of Madhwa Monks of Karnataka, Dr. R. Sathyanarayana, Gnana Jyothi Kala Mandir, Bangalore, 1988

17 ಈ ಪರಿಯ ಸೊಬಗು, ಡಾ. ಎಚ್. ಎನ್. ಮುರಳೀಧರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2010

18 ಕರ್ನಾಟಕ ಸಂಗೀತ ಲಕ್ಷ್ಯ–ಲಕ್ಷಣ ಪದ್ಧತಿ, ಭಾಗ 3, ತಿಟ್ಟೆ ಕೃಷ್ಣ ಅಯ್ಯಂಗಾರ್, ಮೈಸೂರು ರಾಜ್ಯದ ವಿದ್ಯಾಭ್ಯಾಸದ ಇಲಾಖೆ, 1973

19 ಶ್ರೀ ವಿಜಯದಾಸಾರ್ಯರು, ಶ್ರೀ ಹರಿದಾಸರತ್ನಂ ಗೋಪಾಲದಾಸರು, ಬೆಂಗಳೂರು, 2001

20 ದಾಸರ ಮುಂಡಿಗೆಗಳು, ಶ್ರೀ ಚತುರ್ವೇದಿ ವೇದವ್ಯಾಸಾಚಾರ್ಯ, ಶ್ರೀ ವಿದ್ಯಾಮಾನ್ಯ ಪ್ರಕಾಶನ, ಉಡುಪಿ, 2003

21 ದಾಸ ಸಾಹಿತ್ಯ ಕೋಶ, ಕಠಿಣ ಶಬ್ದಾರ್ಥಗಳು, ನಾವೆಲ್ಪಿ ಜಿ. ವೆಂಕಟೇಶ್, ಪ್ರಿಸಮ್ ಬುಕ್ಸ್ ಪ್ರೈ. ಲಿ. ಬೆಂಗಳೂರು, 2015

22 ಶ್ರೀ ಹರಿದಾಸರ ಹತ್ತು ಕೃತಿಗಳು, ಶ್ರೀ ಮಾನಕರಿ ಶ್ರೀನಿವಾಸಾಚಾರ್ಯ, ಶ್ರೀ ಹರಿದಾಸ ವಿದ್ಯಾನಿಲಯ, ಬಳ್ಳಾರಿ, 2004

23 ದಾಸ ಸಾಹಿತ್ಯ ಸೌರಭ, ಸಂಪುಟ 2, ಶ್ರೀ ಶ್ರೀನಿವಾಸ ಮಠದ, ಗೀತಾ ಪ್ರಕಾಶನ, ವಿಜಾಪುರ 1999

24 ಹರಿದಾಸ ತರಂಗ ಸಂಪುಟ 1, ವ್ಯಾಸಾನಂದದಾಸ ಪ್ರತಿಷ್ಠಾನ, ಬೆಂಗಳೂರು, 2014, ಇದರಲ್ಲಿ ಶ್ರೀ ಎ.ಬಿ. ಶ್ಯಾಮಾಚಾರ್ಯರು ಬರೆದ ಲೇಖನ

25 ಹರಿದಾಸ ತರಂಗ ಸಂಪುಟ 2, ವ್ಯಾಸಾನಂದದಾಸ ಪ್ರತಿಷ್ಠಾನ, ಬೆಂಗಳೂರು, 2016, ಇದರಲ್ಲಿ ಶ್ರೀಮತಿ ಸುಮನಾ ಬದರೀನಾಥ್ ಅವರು ಬರೆದ ಲೇಖನ

26 ಹರಿದಾಸರು ಕಂಡ ಗುರುರಾಯರು, ಶ್ರೀಮತಿ ಸುಮನ ಬದರೀನಾಥ್, ಬೆಂಗಳೂರು, ಪ್ರಕಟನೆ 2014

27 ಚಿಣ್ಣರಿಗಾಗಿ ಆಯ್ದ ಹರಿದಾಸರ ಕೀರ್ತನೆಗಳು, ನಾವೆಲ್ಪಿ ಜಿ. ವೆಂಕಟೇಶ್, ಶ್ರೀ ರಾಘವೇಂದ್ರ ದರ್ಶನ ಕೇಂದ್ರ, ಬೆಂಗಳೂರು, 2019

28 dasasahithyamahithi.com ಎಂಬ ವೆಬ್ ಸೈಟಿನ ಮಾಸಪತ್ರಿಕೆಗೆ ಡಾ. ಎಚ್. ಸತ್ಯನಾರಾಯಣಾಚಾರ್ಯರು ಬರೆದುಕೊಟ್ಟ ಆಶೀರ್ವಾದಪೂರ್ವಕ ಸಂದೇಶ

## ಭಾಗವತರ ಲಕ್ಷಣ

ರಂಗಾ ನಿನ್ನ ಕೊಂಡಾಡುವ ಮಂಗಳಾತ್ಮರ
ಸಂಗಸುಖವಿತ್ತು ಕಾಯೋ ಕರುಣಾ ಸಾಗರ ಪ

ಅರಿಯರೋ ನೀನಲ್ಲದೆ ಮತ್ತನ್ಯದೈವರ
ಮರೆಯರೋ ನೀ ಮಾಡಿದ ಅನಿಮಿತ್ತೋಪಕಾರ
ತೊರೆಯರೋ ನಿನ್ನಂಘ್ರಿ ಸೇವಾ ಪ್ರತಿವಾಸರಾ
ಒರೆಯರೋ ಪರತತ್ವವಲ್ಲದೆ ಇತರ ವಿಚಾರಾ 1

ಮೂಕ ಬಧಿರರಂತಿಪ್ಪರೋ ನೋಳ್ಪಜನಕೆ
ಕಾಕುಯುಕುತಿಗಳನ್ನು ತಾರರೋ ಮನಕೆ
ಸ್ವೀಕರಿಸರನರ್ಪಿತ ಒಂದು ಕಾಲಕ್ಕೆ
ಆ ಕೈವಲ್ಯಭೋಗ ಸುಖ ಅವರಿಗೆ ಬೇಕೆ 2

ಕಂಡಕಂಡಲ್ಲಿ ವಿಶ್ವರೂಪ ಕಾಂಬೋರೋ
ಉಂಡು ಉಣಿಸಿದ್ದೆಲ್ಲ ನಿನ್ನ ಯಜ್ಞವೆಂಬರೋ
ಬಂಡುಣಿಯಂದದಿ ನಾಮಾಮೃತವ ಸವಿವರೋ
ಹೆಂಡಿರು ಮಕ್ಕಳು ನಿನ್ನ ತೊಂಡರೆಂಬೋರೋ 3

ಬಿಡರು ತಮ್ಮ ಸ್ವಧರ್ಮಗಳೇನು ಬಂದರೂ
ಬಡರು ದೈನ್ಯ ಒಬ್ಬರಿಗೂ ಲೋಕ ವಂದ್ಯರೊ
ಪಿಡಿಯರೋ ನಿನ್ನ ದ್ವೇಷಿಗಳಿಂದೇನು ಬಂದರು
ಕೊಡುವರೋ ಬೇಡಿದಿಷ್ಟಾರ್ಥ ನಿತ್ಯಾನಂದರೂ 4

ಜಯಾಜಯ ಲಾಭಾಲಾಭ ಮಾನಾಪಮಾನಾ
ಭಯಾಭಯ ಸುಖದುಃಖ ಲೋಷ್ಟ ಕಾಂಚನಾ
ಪ್ರಿಯಾಪ್ರಿಯ ನಿಂದಾಸ್ತುತಿಗಳನುದಿನಾ
ಶ್ರೀಯರಸ ಚಿಂತಿಸುವರೋ ನಿನ್ನ ಅಧೀನ 5

ಈಶಿತವ್ಯರೆಂಬರೋ ಏಕಾಂತ ಭಕ್ತರು
ದೇಶಕಾಲೋಚಿತ ಧರ್ಮ ಕರ್ಮಾಸಕ್ತರು
ಆಶಾ ಕ್ರೋಧ ಲೋಭ ಮೋಹ ಪಾಶ ಮುಕ್ತರು
ಈ ಸುಜನರೇವೆ ಶಾಪಾನುಗ್ರಹ ಶಕ್ತರು 6

ನಗುವರೋ ರೋದಿಸುವರೊ ನಾಟ್ಯವಾಡೋರೊ
ಬಗೆಯರೋ ಬಡತನ ಭಾಗ್ಯ ಭಾಗವತರು
ತೆಗೆಯರೋ ನಿನ್ನಲ್ಲಿ ಮನ ಒಮ್ಮೆಗಾದರೂ
**ಜಗನ್ನಾಥವಿಠಲ** ನಿನ್ನವರೇನು ಧನ್ಯರೋ 7